# ಕೊಡಗು ಸಂಗಾತಿ

ಸಂಪಾದಕಿ : ಪಟ್ಟೆಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 2 ಸಂಚಿಕೆ : 14 ಜುಲೈ 15 ರಿಂದ 30 – 1998 ಪುಟಗಳು : 24 ರೂ. 5



ಇದೇನು ! ಹಾಲು ಉಕ್ಕಿ ಹರಿಯುತ್ತಿದೆಯೇ ಎಂದು ಹುಬ್ಬೇರಿಸಬೇಡಿ.
ಮಡಿಕೇರಿಯ ಅಬ್ಬಿ ಫಾಲ್ಸ್ ಮಳೆಗಾಲದಲ್ಲಿ
ಮೈದುಂಬಿ ಹರಿಯುತ್ತಿರುವ ದೃಶ್ಯ

## ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**

ಮುದ್ರಕರು :
**ಮಣ್ಣಂಡ್ರ ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**
180/ಎ, 6ನೇ ಮುಖ್ಯ ರಸ್ತೆ,
ವಿನಾಯಕನಗರ, ಮೈಸೂರು-12

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮೀಪುರಂ, ಮೈಸೂರು-12.
ಫೋನ್ : 516771

**ಮಡಿಕೇರಿಯ ನಮ್ಮ ವಿಳಾಸ**

**ಕೊಡಗು ಸಂಗಾತಿ**
C/o ನಂಗಾರ್ ಆಡಿಯೋ ವೀಡಿಯೊ
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ-571 201

## ಒಳನೋಟ

ಪುಟಗಳು


- ಸಂಪಾದಕೀಯ 2
- ಮರ್ಕಟ ಬುದ್ಧಿ 3
- ಸಮಾಜದಲ್ಲಿ ಸ್ತ್ರೀಗಿರುವ ಸ್ವಾತಂತ್ರ್ಯ 5
- ಕರ್ತವ್ಯ ನಿಷ್ಠರಾದ ಆನೆ ಮತ್ತು ಗಜರಾಜ ದಂಪತಿಗಳು ವಿವೇಕವಾಣಿ 6
- ಆರೋಗ್ಯ ಚಿಂತನ 7
- ಕವನ, ಪದಬಂಧ 8
- ಗೌಡರ ವಿವಾಹ ಪದ್ಧತಿಯ ಶೋಭಾನೆಗಳು 9
- ಸ್ನೇಹದ ಮಹತ್ವ 10
- ಶಾಪ ಪಡೆದ ಕೋಳಿ 11
- ಗೌಡ ಕೇಸರಿ ನಿಡ್ಯಮಲೆ ಮುದ್ದಪ್ಪನವರ ಜೀವನ ಚರಿತ್ರೆ [ಮುಂದುವರಿದ ಭಾಗ] 12
- ಹರಟೆ-ಎರಡು ಕಾರಣಗಳು ??? 13
- ನಿಮ್ಮ ಪತ್ರಗಳು 14


### ಅರೆ ಭಾಷೆರ ವಿಭಾಗ


- ನಿಮ್ಮ ಕೋಳಿಗೆ ಎರ್ಡ್ ತಲೆ ಉಟ್ಟಾ? 15
- ಧಾರಾವಾಹಿ : ಕರಿ ಚಿನ್ನ ಭಾಗ – 9 17
- ಅಪ್ಪನ ಪರದಾಟ, ಅವ್ವನ ಕಿರ್‌ಚಾಟ 19


### ಚಂದಾ ವಿವರ

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

# ಸಂಪಾದಕೀಯ

## ಹರಿಕೆ-ಹಾಡು, ಮಾಟ-ಮಂತ್ರ-ತಂತ್ರ

ಮನುಷ್ಯ ಎಲ್ಲ ಪ್ರಾಣಿಗಳಿಗಿಂತ ಉತ್ತಮ ಹುಟ್ಟಿದ ಪ್ರಾಣಿ. ಎಲ್ಲಾ ಪ್ರಾಣಿಗಳಿಗಿಂತ ಯೋಚನಾಶಕ್ತಿ, ಬುದ್ಧಿಶಕ್ತಿ ಬೇರೆ ಪ್ರಾಣಿಗಳಿಗಿಂತ ಹೆಚ್ಚು. ಇದು ನಿಸರ್ಗ ಅಥವಾ ದೇವರು ಕೊಟ್ಟವರ.

ಮನುಷ್ಯನಿಗೆ ಯೋಚನಾಶಕ್ತಿ ಇರುವುದರಿಂದಲೇ ಬೇರೆ ಪ್ರಾಣಿಗಳಿಗಿಂತ ಭಿನ್ನವಾಗಿದ್ದಾನೆ. ಆದರೆ ಬೇರೆ ಪ್ರಾಣಿಗಳು ಅವುಗಳ ಸೃಷ್ಠಿ ಈ ಪ್ರಪಂಚದಲ್ಲಿ ಆಗಿದ್ದ ದಿನಗಳಿಂದ ಇಂದಿನವರೆಗೆ ಒಂದೇ ರೀತಿಯ ಆಹಾರ, ಒಂದೇ ರೀತಿಯ ನಡಿಗೆ ಜೀವನ ಕ್ರಮದಿಂದ ಮುಂದು ವರಿಯುತ್ತಿದೆ. ಒಂದು ವೇಳೆ ಪ್ರಾಣಿಗಳ ದೇಹದ ಆಕೃತಿಯಲ್ಲಿ ಪ್ರಾರಂಭದಲ್ಲಿ ಇದ್ದುದಕ್ಕಿಂತ ಸ್ವಲ್ಪ ವ್ಯತ್ಯಾಸವಾಗಿರಬಹುದು. ಮನುಷ್ಯನ ಸಾಕುಪ್ರಾಣಿಗಳಾದ ದನ, ಕೋಣ, ನಾಯಿ, ಬೆಕ್ಕು, ಕೋಳಿ, ಹಂದಿ ಮುಂತಾದವುಗಳು ತಾನು ಕಾಡಿನಲ್ಲಿ ಜೀವಿಸುವ ರೀತಿಗಿಂತ ಸ್ವಲ್ಪ ವ್ಯತ್ಯಾಸದ ವಾತಾವರಣದಲ್ಲಿ ವಾಸಿಸುತ್ತಿರಬಹುದು ಅಥವಾ ಆಹಾರಭ್ಯಾಸದಲ್ಲೂ ವ್ಯತ್ಯಾಸವಾಗಿರಬಹುದು. ಆದರೆ ಅವುಗಳಿಗೆ ಯೋಚನಾಶಕ್ತಿ ಹೆಚ್ಚಲಿಲ್ಲ. ಮನುಷ್ಯ ತನ್ನ ಬೆತ್ತಲೆಯಾಗಿ ಅಲೆದಾಡುವ ಜೀವನದಿಂದ ಇಂದಿನ ಸ್ಥಿತಿಯ ಜೀವನಕ್ಕೆ ಅವನ ಬುದ್ಧಿಶಕ್ತಿಯೇ ಕಾರಣವಾಗಿದೆ.

ಬುದ್ಧಿಶಕ್ತಿ ಹೆಚ್ಚಾದಂತೆ ಧೈರ್ಯ, ಅಂಜಿಕೆ, ನಾಚಿಕೆ, ಶಾಂತಗುಣ, ಪರಿಸರದೊಡನೆ ಹೊಂದಿಕೊಳ್ಳುವ ಗುಣಗಳು, ತ್ಯಾಗಬುದ್ಧಿ, ನಿಸ್ವಾರ್ಥ ಬುದ್ಧಿ, ಪರೋಪಕಾರ ಬುದ್ಧಿ ಹೆಚ್ಚಾದವು.

ಮನುಷ್ಯನ ಪ್ರಯತ್ನದಿಂದ ವಿಜ್ಞಾನ, ತಂತ್ರಜ್ಞಾನ ಬೆಳೆಯುತ್ತಾ ಅಜ್ಞಾನಿಯಾದ ಮಾನವ ಜ್ಞಾನಿಯಾಗಿದ್ದಾನೆ. ಹೀಗಿದ್ದರೂ ಮನುಷ್ಯ ಪ್ರಯತ್ನ ಅಜ್ಞಾನಿಯಾಗಿದ್ದಾಗ ವಿಜ್ಞಾನದ ಸಹಾಯದಿಂದ ಹಿಂದೆ ಇದ್ದ ಮೂಢ ನಂಬಿಕೆಗಳನ್ನು ಬದಿಗೆ ಸರಿಸಿ ವೈಜ್ಞಾನಿಕವಾದ ಚಿಂತನೆ ಮಾಡುತ್ತಾನೆ ಹಾಗೂ ವಿಜ್ಞಾನದ ಫಲವನ್ನು ಉಪಯೋಗಿಸಿಕೊಳ್ಳುತ್ತಾನೆ. ಹಿಂದೆ ಮೂಢ ನಂಬಿಕೆಗಳಿಂದ ಮಾಡಿಕೊಂಡಿದ್ದ ಪದ್ಧತಿಗಳು ಸಮಾಜದ ಸಂಸ್ಕೃತಿಯಲ್ಲ. ಉದಾಹರಣೆಗೆ ವಾಂತಿಭೇದಿ, ಸಿಡುಬು, ನೀರುಕೊಟ್ಟೆಲೆ, ಮೂರ್ಛೆರೋಗಗಳು ದೇವರ ಉಪದ್ರವೆಂದು ತಿಳಿದುಅದನ್ನು ಹೋಗಲಾಡಿಸಲು, ದೈವ ದೇವರಿಗೆ ಹರಿಕೆ ಹೊತ್ತು, ಕಾದು ಕುಳಿತುಕೊಳ್ಳುವ ರೀತಿ ಇತ್ತು. ಆದರೆ ವೈಜ್ಞಾನಿಕ ಸಂಶೋಧನೆಗಳಿಂದ ಈ ರೀತಿಯ ರೋಗಗಳನ್ನು ಔಷಧಿಯ ಮುಂಜಾಗ್ರತಾ ಕ್ರಮದಿಂದ ಗುಣಪಡಿಸಿಕೊಳ್ಳಬಹುದೆಂಬುದನ್ನು ಜನರು ಅರಿತುಕೊಳ್ಳಬೇಕು. ಯಾರಾದರು ಒಬ್ಬ ಗಂಡಸು ಹೆಂಗಸಿನ ಮನೋರೋಗವನ್ನು ಪಿಶಾಚಿಯ ಸೋಂಕಿನಿಂದಾಗಿ ಆಗುವುದೆಂದು ಮಂತ್ರಗಾರರನ್ನೋ ಅಥವಾ ಯಾರೋ ಛಿದ್ರಮಾಡಿ ಹಾಗಾಯಿತೆಂಬ ಭಾವನೆಯಿಂದ ಮನೋವ್ಯಾಧಿಯುಳ್ಳ ವ್ಯಕ್ತಿಯನ್ನು ಮನಶಾಸ್ತ್ರಜ್ಞರ ಹತ್ತಿರ ಕರೆದುಕೊಂಡು ಹೋಗಿ ಪರೀಕ್ಷೆಗೆ ಒಳಪಡಿಸಿ, ತಕ್ಕ ವೈದ್ಯಕೀಯ ಸೌಲಭ್ಯಗಳನ್ನೂ ಪಡೆಯದೆ, ರೋಗ ಹೆಚ್ಚಾದಾಗ ವೈದ್ಯರ ಹತ್ತಿರ ಕರೆದುಕೊಂಡು ಹೋಗಿ ವೈದ್ಯರೂ ಕಾಪಾಡುವ ಹಾಗಿಲ್ಲ, ಮಂತ್ರವಾದಿಯೂ ಬದುಕಿಸಲಾಗದೆ ರೋಗಿಯು ನರಳಿ ನರಳಿ ಸತ್ತು ಹೋಗುವ ಪರಿಸ್ಥಿತಿ ಇದ್ದು, ಮೂಢನಂಬಿಕೆಯ ದೇವರು-ದಿಂಡರು ಮಂತ್ರವಾದಿ ಅಥವಾ ಪುರೋಹಿತರು ಹಣ ಸುಲಿಯುವ ತಂತ್ರಕ್ಕೆ ಸಿಲುಕಿ ಹಣ ಕಳೆದುಕೊಂಡು ಹೆಣವನ್ನು ಪಡೆಯುವ ಪರಿಸ್ಥಿತಿ ನಮ್ಮನರಲ್ಲಿ ಅದೆಷ್ಟೋ ಇದೆ. ರೋಗ ಪ್ರಾರಂಭವಾದಾಗ ಮೊದಲು ತಮ್ಮ ಮನೆಯ ಚಾಮುಂಡಿಗೆ ಒಂದು ಹಂದಿ ಕೊಡುತ್ತೇನೆಂದು ಹರಕೆ ಹೊತ್ತು, ನಂತರ ಸ್ವಲ್ಪ ದಿನ ಕಳೆದಮೇಲೆ ಒಬ್ಬ ಮಂತ್ರವಾದಿಯ ಮೊರೆ ಹೊಕ್ಕು, ಹೋಮ, ತಾಯಿತ ಮಾಡಿಸಿ ಗುಣವಾಗದೆ, ಚಿಟ್ಟೆಚಿಕ್ಕ ಅಮ್ಮನಿಗೆ ಹರಿಕೆ ಹೊತ್ತು, ಕುಂದರು ಮೊಟ್ಟೆ ಮಾರಿಯಮ್ಮನಿಗೆ ಕೋಳಿ ಕೊಟ್ಟು ಈ ರೀತಿ ದೈವಗಳಿಗೆಲ್ಲಾ ಹರಕೆ, ಬಲಿ ತೆಗೆಯುವುದು, ಎಲ್ಲವನ್ನು ಮಾಡಿ ಸೋತ ನಂತರ ವೈದ್ಯರ ಹತ್ತಿರ ಹೋಗುವಾಗ ರೋಗಿಯ ಪ್ರಾಣ ಮಾತ್ರ ಉಳಿದಿದ್ದು, ನಂತರ ಆಸ್ಪತ್ರೆ ನರ್ಸಿಂಗ್ ಹೋಂಗಳಿಗೆ ಹಣತೆತ್ತು ಜೀವವೂ ಉಳಿಸಲಾಗದೆ ಹಣವೆಲ್ಲಾ ಖರ್ಚಾಗಿ ಬಡವರಾಗುವ ನಿದರ್ಶನಗಳು ಇವೆ. ಇದಕ್ಕೆ ವಿದ್ಯಾವಂತ ಯುವಕ-ಯುವತಿಯರು ಈ ರೀತಿ ವರ್ತಿಸುವವರಿಗೆ ಸರಿಯಾದ ಮಾರ್ಗದರ್ಶನ ಮಾಡಬೇಕು. ಹಿಂದಿನಕಾಲದಲ್ಲಿ ನಡೆದುದೆಲ್ಲಾ ಪದ್ಧತಿಗಳಲ್ಲ, ಈ ವಿಷಯದಲ್ಲಿ ಗ್ರಾಮ ಗ್ರಾಮ

[4ನೇ ಪುಟ ನೋಡಿ]

# ಮರ್ಕಟ ಬುದ್ಧಿ

**ಬೈತಡ್ಕ ಹೇಮ ಕುಂಜಪ್ಪ,**
ಪಾಲೂರು

ಮಂಗನಿಂದ ಮಾನವನ ವಿಕಾಸವಾಯಿತು. ಒಂದು ವರ್ಗದ ಮಂಗಗಳೇ ಮಾನವನ ಪೂರ್ವಜರೆಂಬುದು ವಿಜ್ಞಾನಿಗಳ ವಾದ. ಅದೇನೇ ಇರಲಿ ಮರ್ಕಟ, ಮಂಗ, ಕಪಿ, ಕೋತಿ, ವಾನರ ಎಂದೆಲ್ಲ ಕರೆಯಲ್ಪಡುವ ಈ ಪ್ರಾಣಿ ಮನುಷ್ಯನನ್ನು ಬಹಳಷ್ಟು ಹೋಲುವುದಂತೂ ನಿಜ. ಬಹುಶಃ ಹಿಂದೆ ಮಂಗಗಳು ಮನುಷ್ಯರಷ್ಟೇ ಪ್ರಬಲವಾಗಿದ್ದಿರಬೇಕು. ತ್ರೇತಾಯುಗದಲ್ಲಿ ಸೀತೆಯನ್ನು ಹುಡುಕಿ ಹಿಡಿದು, ಸಮುದ್ರಕ್ಕೆ ಸೇತುವೆ ಕಟ್ಟಿ, ರಾವಣಾಧಿ ರಾಕ್ಷಸರನ್ನು ಕೊಂದು, ಲಂಕೆಯನ್ನು ನಾಶಮಾಡಿ ಸೀತೆಯನ್ನು ಹಿಂದಕ್ಕೆ ಕರೆತರುವುದಕ್ಕೆ ಶ್ರೀರಾಮನಿಗೆ ಸಹಾಯ ಮಾಡಿದ ವಾನರರು ಸಾಮಾನ್ಯರೇನಲ್ಲ! ವಾಲಿ, ಸುಗ್ರೀವ, ಅಂಗದ ಮೊದಲಾದ ಕಪಿವೀರರು ಲೋಕ ಪ್ರಸಿದ್ಧರು. ವಿರಾಗ್ರೇಸರ, ಮಹಾಭಕ್ತ, ಮಹಾಬಂಟ ಹನುಮಂತನಂತು ದೇವರ ಅವತಾರವೆಂದೇ ಪರಿಗಣಿಸಲ್ಪಟ್ಟಿದ್ದಾನೆ. ಆದರೆ ನಾನೀಗ ಹೇಳುತ್ತಿರುವುದು ಮಾತ್ರ ಆಧುನಿಕ ಸಾಮಾನ್ಯ ಕಪಿಗಳ ಬಗ್ಗೆ.

ಕಪಿಗಳು ಧೈರ್ಯಶಾಲಿಗಳು ಪಂಡಿತ ಜವಾಹರಲಾಲ್ ನೆಹರೂ ಅವರು ತಮ್ಮ ಜೈಲಿನ ಅನುಭವಗಳಲ್ಲಿ ಒಂದು ಕಡೆ ಹೀಗೆ ಹೇಳಿದ್ದಾರೆ: ಅವರಿದ್ದ ಒಂದು ಜೈಲಿನ ಸುತ್ತಮುತ್ತ ತುಂಬ ಕಪಿಗಳಿದ್ದವು. ಒಮ್ಮೆ ಒಂದು ಮರಿಕಪಿ ಎತ್ತರದ ಜೈಲುಗೋಡೆಯನ್ನಿಳಿದು ಒಳಗೆ ಬಂದಿತು. ಅದಕ್ಕೆ ಮತ್ತೆ ಗೋಡೆ ಹತ್ತಿ ಹೋಗಲು ಸಾಧ್ಯವಾಗಲಿಲ್ಲ. ಜೈಲು ಅಧಿಕಾರಿಯೊಬ್ಬ ಅದನ್ನು ಹಿಡಿದುಕೊಂಡ. ಆಗ ಗೋಡೆಯ ಮೇಲೆ ಕುಳಿತಿದ್ದ ಒಂದು ಗಡವ (ದೊಡ್ಡ ಗಂಡು ಕೋತಿ) ಏಕಾಏಕಿ ಗೋಡೆ ಇಳಿದು 8–10 ಅಧಿಕಾರಿಗಳಿದ್ದ ಗುಂಪಿನ ಮಧ್ಯ ನುಗ್ಗಿತು. ಅಧಿಕಾರಿಗಳು ಕೈಯಲ್ಲಿದ್ದ ಲಾಠಿಯನ್ನು ಯದ್ವಾತದ್ವಾ ಬೀಸಿದರು. ಆದರೆ ಗಡವ ಹೆದರಲಿಲ್ಲ. ಅಧಿಕಾರಿಯ ಮೇಲೇರಿ ಮರಿಯನ್ನು ಕಿತ್ತುಕೊಂಡು ಗೋಡೆ ಏರಿ ಹೋಗಿ ಮರಿಯನ್ನು ಪಾರು ಮಾಡಿತು. ಆ ಮಂಗದ ಧೈರ್ಯವನ್ನು ನೆಹರೂರವರು ತಮ್ಮ ಬರಹದಲ್ಲಿ ತುಂಬ ಹೊಗಳಿದ್ದಾರೆ.

ಹಿಂದೆ ಕೊಡಗಿನಲ್ಲಿ ಏಲಕ್ಕಿ ತೋಟಗಳಿಗೆ ಮಂಗಗಳು ಹಿಂಡು ಹಿಂಡಾಗಿ ಧಾಳಿಯಿಡುತ್ತಿದ್ದವು. ಎಳೆಯ ಗಿಡಗಳನ್ನು ಸುಲಿದು ಒಳಗಿನ ತಿರುಳನ್ನು ತಿಂದು ತೋಟವನ್ನು ನಾಶಮಾಡುತ್ತಿದ್ದವು. ಮನೆಯವರು ಆಗಾಗ ತೋಟಕ್ಕೆ ಹೋಗಿ ಮಂಗಗಳನ್ನು ಓಡಿಸುವುದು ರೂಢಿಯಾಗಿತ್ತು. ಒಂದು ದಿನ ಮಾಚಯ್ಯ ತೋಟಕ್ಕೆ ಹೋದಾಗ ಮಂಗಗಳು ಬಂದಿದ್ದವು. 'ಛೂ, ಛೂ, ಹೋ,ಹೋ' ಎಂದು ಅವರು ಮಂಗಗಳನ್ನು ಬೆದರಿಸತೊಡಗಿದರು. ಅವುಗಳು ಕಂಡ ಕಂಡಲ್ಲಿ ಓಡಿಹೋದವು. ಆದರೆ ಒಂದು ಗಡವ ಮಾತ್ರ ಬೆದರದೆ ಹಲ್ಲು ಕಿರಿಯುತ್ತಾ ಅವರತ್ತ ಬರತೊಡಗಿತ್ತು. ಇದು ಅಪಾಯವೆಂದುಕೊಂಡ ಮಾಚಯ್ಯ ಮನೆಯಕಡೆ ಓಡತೊಡಗಿದರು. ಗಡವ ಕೋಪದಿಂದ ಅವರನ್ನು ಬೆನ್ನಟ್ಟಿತು. ಸುಮಾರು ಒಂದೂವರೆ ಫರ್ಲಾಂಗ್ ದೂರದ ಮನೆಯವರೆಗೂ ಅದು ಬೆನ್ನಟ್ಟಿಹೋಯಿತು. ಅವರು ಒಳಗೆ ಹೋಗಿ ಕೋವಿಯನ್ನು ತೆಗೆದುಕೊಂಡು ಹೊರಗೆ ಬಂದಾಗ ಗಡವ ಕೋಪದ ಪರಾಕಾಷ್ಟೆಯಲ್ಲಿ ಎರಡೂ ಕೈಗಳಿಂದ ಎದೆಯನ್ನು ಬಡಿದುಕೊಂಡು ಅಂಗಳದಲ್ಲಿ ನಿಂತಿತ್ತು. ಗುಂಡುಹಾರಿಸಿ ಅದನ್ನು ಕೊಂದ ಸನ್ನಿವೇಶವನ್ನು ಮಾಚಯ್ಯ ಇನ್ನೂ ಮರೆತಿಲ್ಲ.

ನಾನು ಚಿಕ್ಕವಳಿದ್ದಾಗ ಅಪ್ಪ ಅಮ್ಮನ ಜೊತೆ ತಿರುಪತಿಗೆ ಹೋಗಿದ್ದೆ. ದೊಡ್ಡಪ್ಪ, ದೊಡ್ಡಮ್ಮ ಮತ್ತು ಅವರ ಮಗಳು ಜೊತೆಯಲ್ಲಿದ್ದರು. ದೊಡ್ಡಪ್ಪನ ಕೈಯಲ್ಲಿ ಬಿಳಿಯ ಬಟ್ಟೆಯಲ್ಲಿ ಕಟ್ಟಿದ ಮುಡುಪಿನ ಗಂಟು ಇತ್ತು. ಮುಖ್ಯ ದೇವಸ್ಥಾನದ ಎದುರು ಬೀದಿಯಲ್ಲಿ ಹೋಗುವಾಗ ದೊಡ್ಡಮ್ಮನ ಮಗಳು (ಅಕ್ಕ) ತಿನ್ನಲೆಂದು ಚೀಲದಿಂದ ಬಾಳೆಹಣ್ಣು ತೆಗೆದಳು. ಅಲ್ಲೇ ಇದ್ದ ಮಂಗಗಳಲ್ಲೊಂದು ಅವಳ ಮೇಲೆರಗಿ ಬಾಳೆಹಣ್ಣನ್ನು ಕಸಿದುಕೊಂಡು ಓಡತೊಡಗಿತು. ಹೆದರಿ ಅವಳು ಕಿರುಚಿಕೊಂಡಾಗ ದೊಡ್ಡಪ್ಪ ಅವಳಕಡೆ ಗಮನಹರಿಸಿದರು. ಆಗ ಇನ್ನೊಂದು ಮಂಗ ಅವರ ಕೈಯಲ್ಲಿದ್ದ ಮುಡುಪಿನ ಗಂಟನ್ನು ಕಸಿದುಕೊಂಡು ಓಡಿ ಹೋಯಿತು. ಇದರಿಂದ ನಮಗೆಲ್ಲ ತುಂಬ ಗಾಬರಿಯಾಯಿತು. ಆದರೆ ಏನೂ ಮಾಡಲು ಸಾಧ್ಯವಾಗಲಿಲ್ಲ. ಮಂಗ ಗಂಟನ್ನು ಬಿಚ್ಚಿದಾಗ ಅದರಲ್ಲಿ ತಿನ್ನಲೇನೂ ಇರದನ್ನು ಕಂಡು ಅದರಲ್ಲಿದ್ದ ನಾಣ್ಯಗಳನ್ನು ಒಂದೊಂದಾಗಿ ಅಲ್ಲಿ ಇದ್ದ ಕೆರೆಗೆ ಎಸೆಯಿತು. ಏನೂ ಮಾಡಲಾಗದ ನಾವು "ದೇವರಿಗೆ ಸೇರಬೇಕಾದುದು ದೇವರ ಕೆರೆಯನ್ನಾದರೂ ಸೇರಿತಲ್ಲಾ" ಎಂಬ ಸಮಾಧಾನದೊಂದಿಗೆ ಯಾತ್ರೆ ಮುಗಿಸಿದೆವು. ಈ ಘಟನೆ ಇನ್ನೂ ಕೂಡ ನನ್ನ ಮನಸ್ಸಿನಲ್ಲಿ ಹಸಿರಾಗಿಯೇ ಇದೆ.

ಮಂಗಗಳು ನಾವು ಮಾಡಿದಂತೆಯೇ ಮಾಡುವುದನ್ನು ನಾವೆಲ್ಲ ನೋಡಿದ್ದೇವೆ. ಒಮ್ಮೆ ಬಿದ್ದಪ್ಪನಿಗೆ ಕಾಡುಕೋಳಿಗಳನ್ನು ಹಿಡಿಯಲು ಹಾಕಿದ್ದ ಸಿಡಿಯಲ್ಲಿ ಒಂದು ಕಪಿಮರಿ ಸಿಕ್ಕಿತು. ಮನೆಗೆ ತಂದು ಮುದ್ದಿನಿಂದ ಸಾಕಿದ. ದೊಡ್ಡದಾಗಿ ಮನೆತುಂಬಾ ಓಡಾಡಿಕೊಂಡಿತ್ತು. ಅವನ ತಾಯಿ ಗಂಗಮ್ಮ ಎಲ್ಲಿ ಹೋದರೂ, ಏನು ಮಾಡಿದರೂ ಮಂಗ ಜೊತೆಯಲ್ಲೆ ಇರುತ್ತಿತ್ತು. ಅವರ ಸೆರಗನ್ನು ಹಿಡಿದುಕೊಂಡುಓಡಾಡುವುದು ಒಂದು ವಿಶೇಷವಾಗಿತ್ತು. ಒಮ್ಮೆ ಅವರು ತರಕಾರಿ ತೋಟಕ್ಕೆ ಹೋದಾಗ ಇದೂ ಹೋಯಿತು. ತೋಟದಲ್ಲಿ ಒಂದು

ಬಳ್ಳಿ ತುಂಬ ಸೋರೆಕಾಯಿಗಳಿದ್ದವು. ಗಂಗಮ್ಮ ಅಡಿಗೆಗೆಂದು ಒಂದು ಬೆಳೆದ ಸೋರೆಕಾಯಿಯನ್ನು ಕುಯಿದು ಆಕಡೆ ಇಟ್ಟು ಇನ್ನೊಂದು ಬದಿಗೆ ಹೋದರು. ಅವರು ಮತ್ತೆ ಅಲ್ಲಿಗೆ ಬಂದಾಗ ಬಳ್ಳಿಯಲ್ಲಿದ್ದ 8–10 ಸೋರೆಕಾಯಿಗಳೂ ಅಲ್ಲಿದ್ದವು. ಗಂಗಮ್ಮ ಸೋರೆಕಾಯಿಯನ್ನು ಕುಯ್ದು ತಂದದ್ದನ್ನು ಗಮನಿಸಿದ ಮಂಗ ಹಿಂದು ಮುಂದು ಯೋಚಿಸದೆ ಉಳಿದವುಗಳನ್ನು ಕುಯ್ದು ತಂದು ಅದರ ಜೊತೆಯಲ್ಲಿರಿಸಿತು.ಕೋಪ ನೆತ್ತಿಗೇರಿದ ಗಂಗಮ್ಮ ಅಲ್ಲಿ ಇದ್ದ ಹುಣಸೇ ಅಡಾರಿನಿಂದ ಅದಕ್ಕೆ ಎರಡು ಬಾರಿಸಿದರು. ಕೀಚಿಡುತ್ತಾ ಪಕ್ಕದ ಕಾಡಿಗೆ ಓಡಿದ ಮಂಗ ಮತ್ತೆ ಬರಲಿಲ್ಲ.

ಇನ್ನೊಂದು ಕಡೆಯಲ್ಲಿ ಒಂದು ಸಾಕಿದ ಮಂಗ ಇತ್ತು. ಅದಕ್ಕೆ ವಿಪರೀತ ಕುತೂಹಲ. ಕೇಪಿನ ಕೋವಿಯನ್ನು ತುಂಬಿ ಕೆಲವು ದಿನ ಹಾಗೆ ಇಟ್ಟರೆ ಅದಕ್ಕೆ ಶೀತ ಹಿಡಿಯುವ ವಿಷಯ ನಿಮಗೆಲ್ಲ ಗೊತ್ತು. ಹಾಗೆ ಶೀತ ಹಿಡಿದರೆ ಮೊಳೆಗೆ ಬೆಂಕಿ ಇಟ್ಟು ಗುಂಡನ್ನು ಹಾರಿಸಿ ಹೊಸದಾಗಿ ತುಂಬುವ ವಿಷಯವೂ ಗೊತ್ತಲ್ಲವೇ? ಅವರಲ್ಲಿ ಕೇಪಿನ ಕೋವಿ ಇತ್ತು ಒಮ್ಮೆ ಶೀತ ಹಿಡಿದಾಗ ಯಜಮಾನ ಕೋವಿಯನ್ನು ಅಂಗಳಕ್ಕೆ ತಂದು ಮೊಳೆಗೆ ಬೆಂಕಿಕೊಳ್ಳಿ ಇಟ್ಟು ಗುಂಡು ಹಾರಿಸಿದ. ಇದನ್ನೆಲ್ಲಾ ಚಾಚು ತಪ್ಪದೆ ಮಂಗ ನೋಡಿಕೊಂಡುಕುಳಿತಿತ್ತು. ಆಮೇಲೆ ಸರಿಯಾಗಿ ತುಂಬಿ ಸ್ವಲ್ಪ ಒಣಗಲೆಂದು ಅಂಗಳದಲ್ಲಿ ಇಟ್ಟು ಎಲ್ಲೋ ಆ ಕಡೆ ಹೋದ. ಮಂಗಕ್ಕೆ ಏನನಿಸಿತ್ತೋ ಏನೊ ! ಒಳಗೆ ಹೋಗಿ ಒಲೆಯಿಂದ ಬೆಂಕಿಕೊಳ್ಳಿ ತಂದು ಮೊಳೆಯ ಬಳಿ ಇಟ್ಟು ಮುಂದೆ ಹೋಗಿ ಕೋವಿಯ ಕೊಳದ ಬಾಯಿಗೆ ಮುಖವಿಟ್ಟು ಬಗ್ಗಿ ನೋಡುತಿತ್ತು. ಕ್ಷಣದಲ್ಲಿ ಗುಂಡುಹಾರಿತು. ಮಂಗನ ಮುಸುಡಿ ಪುಡಿ ಪುಡಿಯಾಗಿಹೋಯಿತು. ಕೆಟ್ಟ ಕುತೂಹಲ ಪ್ರಾಣವನ್ನೇ ತೆಗೆದಿತ್ತು.

ಇನ್ನೊಂದು ಕಡೆಯಲ್ಲಿ ಒಂದು ಮನೆಯವರು ಏಲಕ್ಕಿ ತೋಟಕ್ಕೆ ಮಂಗಗಳು ಬರದಂತೆ ತಡೆಯಲು ಒಂದು ಉಪಾಯ ಹೂಡಿದರು. ತೋಟದ ಮಧ್ಯೆ ಮರವೊಂದಕ್ಕೆ ಧ್ವನಿವರ್ಧಕವನ್ನು ಕಟ್ಟಿ ಮನೆಯ ರೇಡಿಯೋಕ್ಕೆ ಸಂಪರ್ಕ ಕಲ್ಪಿಸಿದರು. ರೇಡಿಯೋ ಹಾಕಿದಾಗ ತೋಟದ ಧ್ವನಿವರ್ಧಕದಲ್ಲಿ ದೊಡ್ಡ ಬೊಬ್ಬೆಯಾಗಿ ಮಂಗಗಳು ಬರಲಾರವೆಂಬುದೇ ಉಪಾಯ. ನಾಲ್ಕಾರು ದಿನ ಉಪಾಯ ಫಲಿಸಿತು. ಮನೆಯವರಿಗೆ ಖುಷಿಯಾಯಿತು. ಆದರೆ ಒಂದು ದಿನ ತೋಟಕ್ಕೆ ಹೋದಾಗ ಮಂಗಗಳೆಲ್ಲ ಧ್ವನಿವರ್ಧಕದ ಸುತ್ತ ಕುಳಿತು ಹಿಂದಿ ಚಿತ್ರಗೀತೆಯನ್ನು ಕೇಳುತ್ತಾ ಆನಂದಿಸುತ್ತಿದ್ದವು. ಒಂದೆರಡು ಮನುಷ್ಯರಿಗೆ ನಾವೇನು ಕಡಿಮೆ ಎಂಬಂತೆ ಕಾಲಮೇಲೆ ಕಾಲು ಹಾಕಿಕೊಂಡು ಕುಳಿತಿದ್ದವು ಎಂದರೆ ನಂಬಲಾರಿರಿ.

ಪಂಚತಂತ್ರ ಮೊದಲಾದ ಕತೆಗಳಲ್ಲಿ ಮಂಗಗಳು ಚುರುಕು ಬುದ್ಧಿ ತೋರಿಸಿದ ಉದಾಹರಣೆಗಳಿವೆ. ಆದರೆ ಈಗ ಮಾತ್ರ ಕೇವಲ ವಿಜ್ಞಾನಿಗಳ ಪ್ರಯೋಗಗಳಿಗೆ ಬಲಿಪಶುಗಳು. ಅಲ್ಲೊಮ್ಮೆ ಇಲ್ಲೊಮ್ಮೆ ಕೊರವರ ಕೈಯಲ್ಲಿ ಸಿಕ್ಕಿ 'ಲಾಗ ಹೊಡೆಯೋ ಮಂಗಣ್ಣ' ಎಂದಾಗ ಲಾಗ ಹಾಕಿ ಧನಿಯ ಹೊಟ್ಟೆ ತುಂಬಿಸುತ್ತವೆ. ಕೆಲವು ಸಿನೆಮಾಗಳಲ್ಲೂ ಒಳ್ಳೆಯ ನಟನೆ ಮಾಡಿದ ಮಂಗಗಳಿವೆ. ಸರಿಯಾಗಿ ನೋಡಿ, ನಮ್ಮ ಪೂರ್ವಜರ ಮರ್ಕಟ ಬುದ್ಧಿ ನಮ್ಮಲ್ಲಿ ಸಾಕಷ್ಟು ಇಲ್ಲವೇ ?

(ಇಲ್ಲಿ ಬರುವ ಘಟನೆಗಳು ಸತ್ಯ, ಆದರೆ ಹೆಸರುಗಳು ಕಾಲ್ಪನಿಕ) ○

(2ನೇ ಪುಟದಿಂದ ಮುಂದುವರಿದುದು)

ಗಳಲ್ಲಿ ಸ್ಥಾಪಿಸಿದ ಆರೋಗ್ಯ ಕೇಂದ್ರ, ಆಸ್ಪತ್ರೆಗಳ ಸಂಪರ್ಕ ಕಲ್ಪಿಸಬೇಕು. ಇವುಗಳನ್ನು ಯುವಕ–ಯುವತಿಯರು, ಮಹಿಳಾ ಸಮಾಜ, ಯುವಕಸಂಘಗಳು ಮಾಡಬೇಕು. ವರ್ಷಕ್ಕೊಂದಾವರ್ತಿ ಸಭೆ ಸೇರಿ, ಊಟ ಮಾಡಿ ಭಾಷಣ ಬಿಗಿದರೆ ಸಾಲದು. ಸರ್ಕಾರಗ್ರಾಮಗ್ರಾಮಗಳಲ್ಲಿ ಶೂಲಗಿತ್ತಿ ಕೇಂದ್ರ, ಪ್ರಾಥಮಿಕ ಆರೋಗ್ಯಕೇಂದ್ರ ತೆರದಿದೆ. ಆದರೆ ಜನರ ಸಹಕಾರವಿಲ್ಲದಿದ್ದರೆ ಅದ್ಯಾವುದೂ ಪ್ರಯೋಜನಕ್ಕೆ ಬಾರವು. ಜನ, ಸಮಾಜ, ಸರ್ಕಾರ ಒಂದಕ್ಕೊಂದು ಸಹಕರಿಸಬೇಕು. ಜನತೆ, ಸರ್ಕಾರ, ಸಮಾಜ ಇವು ಮೂರು ಮುಪ್ಪುರಿಗೊಂಡಂತೆ ಇರಬೇಕು. ಆದರೆ ಮಾತ್ರ ಯಾವುದೇ ಯೋಜನೆ ಕಾರ್ಯಗತವಾಗುವುದಕ್ಕೆ ಸಾಧ್ಯವೆಂದು ಸಂಗಾತಿ ಅನಿಸಿಕೆ. ●

## ಜಾಹೀರಾತು

ಸೋಪು, ಪೇಸ್ಟ್, ಬಾಲು
ಇತ್ಯಾದಿ ಮಾರಾಟವಾಗಲು
ಬೇಕು ಹೆಣ್ಣಿನ ಅರೆ
ನಗ್ನ ಚಿತ್ರದ ಗತ್ತು
ನೋಡಿದರೆ ಕೊಡಬೇಕೆ
ನಿಸುತ್ತದೆ ಮುತ್ತು !
ನೋಡಿದವರಿಗೆಲ್ಲಾ ಬರಿ
ಸುವುದು ಮತ್ತು
ಹಾಗಿದೆ ಅದರ
ಆ ಗಮ್ಮತ್ತು
ಪ್ರತಿ ವಸ್ತುವಿಗೂ
ಹೆಣ್ಣಿನ ಕಸರತ್ತು
ಬಂದಿದೆ ಅವಳಿಗೆ
ಈಗ ವಿಪತ್ತು !
ಹೆಣ್ಣಿಗಾಗಿ ಹೊಡೆದು
ಬಡಿದು ಸಾಯುವ
ಇದೇ ಜಗತ್ತು. !
ಅದಕ್ಕೆ ಹೇಳುವುದು
ಇದೇ ಜಾಹೀರಾತು

● ಕಾನೆಹಿತ್ಲು ನಳಿನಿ ನಂಜಪ್ಪ, ಕುಶಾಲನಗರ

# ಸಮಾಜದಲ್ಲಿ ಸ್ತ್ರೀಗಿರುವ ಸ್ವಾತ್ರಂತ್ರ್ಯ

"ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೆ ತತ್ರ ದೇವತಾ" ಎಂಬುದು ಶಾಸ್ತ್ರಕಾರ ಮನುವಿನ ಉವಾಚ. ಆದರೆ ಇದಕ್ಕೆ ತದ್ವಿರುದ್ಧವಾಗಿ ನಾರಿಯನ್ನು ಪೂಜಿಸುವ ಬದಲು ಅವಳ ಮೇಲೆ ದೌರ್ಜನ್ಯ ಹೆಚ್ಚುತ್ತಿದೆ. ಮಹಿಳೆಯರು ಇಂದಿನ ಪುರುಷ ಪ್ರಧಾನ ಸಮಾಜದಲ್ಲಿ ತಮ್ಮ ಮೇಲೆ ಆಗುತ್ತಿರುವ ಅನ್ಯಾಯ, ಅತ್ಯಾಚಾರ, ದಬ್ಬಾಳಿಕೆ, ಲಿಂಗಬೇಧ ಹಾಗೂ ಹಕ್ಕುಗಳಿಗಾಗಿ ಹೋರಾಟ ನಡೆಸಬೇಕಾಗುತ್ತದೆ.

ಎಲ್ಲೆಡೆ ನಾವು ಕೇಳುತ್ತಿರುವಂತೆ ಪುರುಷನಷ್ಟೇ ಮಹಿಳೆ ಸಮಾನಳು ಎಂಬುದು ಕೇವಲ ಬಾಯಿ ಮಾತೇ ಆಗಿದ್ದು, ಅದು ಇನ್ನೂ ಕಾರ್ಯರೂಪಕ್ಕೆ ಬಾರದಿರುವುದೇ ವಿಪರ್ಯಾಸ.

**ಭಗವತಿ ಪ್ರಸಾದ್**, ಅಂಬ್ರಾಟ ಮದೆ

ಭಾರತದ ಸ್ವಾತಂತ್ರ್ಯ ಇತಿಹಾಸದಲ್ಲಿ ಡಾ|| ಅನಿಬೆಸೆಂಟ್, ಸರೋಜಿನಿ ನಾಯ್ಡು, ಅರುಣಾ ಆಸಫ್ ಅಲಿಯವರಂತಹ ಮಹಿಳಾ ಹೋರಾಟಗಾರ್ತಿಯರು ಅನ್ಯಾಯದ ವಿರುದ್ಧ ಧೈರ್ಯ, ಕೆಚ್ಚೆದೆ ಹಾಗೂ ನಿಸ್ವಾರ್ಥ ಸೇವೆಯಿಂದ ಹೋರಾಡಿದ್ದು, ಅವರು ಹಾಕಿಕೊಟ್ಟಂತಹ ಹಾದಿಯಲ್ಲಿ ಇಂದು ನಾವು ನಡೆದಿದ್ದರೆ ಬಹುಷಃ ಅನ್ಯಾಯ, ಅತ್ಯಾಚಾರ ಮುಂತಾದವುಗಳು ಬಹಳಷ್ಟು ಕಡಿಮೆಯಾಗುತ್ತಿತ್ತು. ಆದರೆ ಇಂದಿನ ಸ್ತ್ರೀಯರಲ್ಲಿ ಹೆಚ್ಚುತ್ತಿರುವ ಅಳುಕು, ಹಿಂಜರಿಕೆಯಿಂದಾಗಿ ಈ ಎಲ್ಲಾ ದುರಂತಗಳು ನಡೆಯುತ್ತಿವೆ.

ದೇಶದಾದ್ಯಂತ ಇಂದು ಸ್ತ್ರೀ ಭ್ರೂಣ ಹತ್ಯೆ ನಿರಾತಂಕವಾಗಿ ನಡೆಯುತಿದ್ದು ಇವುಗಳ ಕುರಿತು ಯಾವುದೇ ಪ್ರತಿಭಟನೆ ನಡೆಯುತ್ತಿಲ್ಲ. ಶಿಕ್ಷಣದ ಕೊರತೆಯೇ ಇದಕ್ಕೆ ಮೂಲ ಕಾರಣ ಎನ್ನಬಹುದು. ಕೇವಲ ಗಂಡುಮಕ್ಕಳಿಗಾಗಿ ಹಾತೊರೆದು ವಂಶೋದ್ಧಾರಕನಾದ ಮಗನಿಂದ ನಮಗೆ ಲಾಭವಿದೆ ಎಂಬುದನ್ನು ಎಷ್ಟೋ ದಂಪತಿಗಳು ತಿಳಿದಿದ್ದಾರೆ. ಹೆಣ್ಣು ಹುಟ್ಟಿ ನಮಗೇನು ಪ್ರಯೋಜನ. ಮುಂದೆ ಅವಳಿಂದ ನಮಗೇ ಖರ್ಚು ಎಂದು ಭಾವಿಸುವವರಿಗೆ ನಮ್ಮ ಸಮಾಜದಲ್ಲೇನು ಕೊರತೆಯಿಲ್ಲ. ಆದರೆ ಇಂತಹ ಮನೋಭಾವ ನಿಜಕ್ಕೂ ಒಳ್ಳೆಯದಲ್ಲ. "ಹೆಣ್ಣಿನಿಂದ ಇಹವು, ಹೆಣ್ಣಿನಿಂದ ಪರವು, ಹೆಣ್ಣಿನಿಂದ ಸಕಲ ಸಂಪದವು" ಎಂಬ ಈ ಉಕ್ತಿಯನ್ನು ಎಷ್ಟೋ ಜನರು ಬಹುಷಃ ತಮ್ಮ ಮಸ್ತಕದಿಂದ ದೂರ ಇಟ್ಟಂತೆ ಬಾಸವಾಗುತ್ತಿದೆ.

ಹಳ್ಳಿಯ ಹೆಣ್ಣುಮಕ್ಕಳಿಗೆ ವಿದ್ಯೆ ಎನ್ನುವುದು ಮರೀಚಿಕೆಯಾಗಿಯೇ ಉಳಿದಿದ್ದು, ಮನೆಯ ಕೆಲಸ ಮಾಡಿ ಮನೆಯೊಳಗೇ ಬಿದ್ದಿರಬೇಕಾಗುತ್ತದೆ. ಹೆಣ್ಣು ಹೆತ್ತವರು ಅವಳ ವಿದ್ಯಾಭ್ಯಾಸಕ್ಕೆ ಅರ್ಧದಲ್ಲಿಯೇ ತಿಲಾಂಜಲಿಯನ್ನು ಹಾಕಿ, ಒಬ್ಬ ಗಂಡಿಗೆ ಒಪ್ಪಿಸಿ ತಮ್ಮ ಕೈತೊಳೆದುಕೊಂಡು, ಅವಳು ಮುಂದೆ ನಾಲ್ಕುಗೋಡೆಯ ಮಧ್ಯದಲ್ಲಿ ಗೃಹ ಬಂಧನದಲ್ಲಿದ್ದು, ಗಂಡ ನೀಡುವ ಎಲ್ಲಾಕಷ್ಟಗಳನ್ನು ಸಹಿಸಿ, ತನಗೆಯಾವುದೇ ರೀತಿಯ ಸ್ವಾತಂತ್ರ್ಯವಿಲ್ಲದೆ, ಆತನ ಅಡಿಯಾಳಾಗಿ ಬಾಳುವುದು ನಿಜಕ್ಕೂ ಶೋಚನೀಯ. ವಿದ್ಯೆ ಇಲ್ಲದ ಹೆಣ್ಣು ಸಮಾಜದಲ್ಲಿ ಬೇಗನೆ ಅನ್ಯಾಯ, ಅತ್ಯಾಚಾರವೇ ಮುಂತಾದ ಕೃತ್ಯಗಳಿಗೆ ಬಲಿಯಾಗುತ್ತಾಳೆ.

ಹಳ್ಳಿಯ ಹೆಣ್ಣುಮಕ್ಕಳ ಪರಿಸ್ಥಿತಿ ಈ ರೀತಿಯಾದರೆ, ವಿದ್ಯಾವಂತ ಹೆಣ್ಣು ಮಕ್ಕಳಲ್ಲೂ ಕೊರತೆ ಕಂಡುಬರುತ್ತದೆ. ಕಲಿಕೆಯಲ್ಲಿ ಗಂಡು ಮಕ್ಕಳಿಗಿಂತ ಮುಂದಿರುವ ಹೆಣ್ಣು ಮಕ್ಕಳು ಮುಂದೆ ಮದುವೆ ಎಂಬ ಪದವಿಗಾಗಿ ಹಾತೊರೆಯುತ್ತಾರೆ. ಇದರ ಪರಿಣಾಮವಾಗಿ ಎಷ್ಟೋ ಹೆಣ್ಣುಮಕ್ಕಳು ತಮ್ಮ ವ್ಯಾಸಂಗದ ಅವಧಿಯಲ್ಲಿ ಇದ್ದಂತಹ ಸಾಮರ್ಥ್ಯ, ಛಲವನ್ನು ಮದುವೆಯಲ್ಲಿ ಕೊನೆಗೊಳಿಸಿ ತಟಸ್ಥರಾಗುತ್ತಾರೆ. ನಂತರ ಮದುವೆಯಾಗಿ ಗಂಡನ ಮನೆಯಲ್ಲಿ ಕಾಲ ಕಳೆಯಬೇಕಾದುದು ಧರ್ಮ ಎಂದು ನಂಬಿ ಉತ್ಸಾಹ, ಸಾಮರ್ಥ್ಯಕ್ಕೆ ಅಂತ್ಯ ಹಾಡುತ್ತಾರೆ. ಇದರಿಂದ ಗಂಡಿಗೆ ಲಾಭವಾಗಿ ಸ್ತ್ರೀಯ ಮೇಲೆ ದಬ್ಬಾಳಿಕೆ ನಡೆಸಲು ಕೆಲವೊಮ್ಮೆ ಕಾರಣವಾಗಬಹುದು.

ಈಗಲೂ ಕೆಲವು ಹಳ್ಳಿ ಪ್ರದೇಶಗಳಲ್ಲಿ ಹೆಣ್ಣನ್ನು ಸುಖದ ಅರಮನೆಗೆ ತಳ್ಳುವಂತೆ ಹೇಳಿ, ಗೆಜ್ಜೆಪೂಜೆಗಳನ್ನು ಮಾಡಿ ಅವಳನ್ನು ವೇಶ್ಯಾವಾಟಿಕೆಗೆ ತಳ್ಳುವ "ದೇವದಾಸಿ" ಪದ್ಧತಿ ಜಾರಿಯಲ್ಲಿರುವುದರಿಂದ ಹೆಣ್ಣು ನರಕ ಯಾತನೆಯನ್ನು ಅನುಭವಿಸಿ, ಕೊನೆಗೆ ಮನೆಯವರಿಂದಲೂ ದೂರವಾಗಿ, ಜೀವನದಲ್ಲಿ ಜಿಗುಪ್ಸೆಗೊಂಡು, ಸಾವಿಗೆ ಶರಣಾಗುವುದನ್ನು ನಾವಿಂದು ಕಾಣುತ್ತಿದ್ದೇವೆ.

50ನೇ ಸ್ವಾತಂತ್ರ್ಯ ವರ್ಷಕ್ಕೆ ಹೆಜ್ಜೆ ಇಟ್ಟಿರುವ ಈ ಸುಸಂದರ್ಭದಲ್ಲಿ ಮಹಿಳಾ ಸ್ವಾತಂತ್ರ್ಯ ಸಮಾನತೆಗೊಂದು ಹೊಸ ಅರ್ಥ ಬರುವುದೆಂದು ಆಶಿಸೋಣವೇ.

## ಒಂದೇ ಉತ್ತರ

ಒಬ್ಬಾತ ಈ ಲಾರಿ ಮಡಿಕೇರಿಗೆ ಹೋಗುತ್ತಾ.

ಇನ್ನೊಬ್ಬಾತ ಈ ಲಾರಿಯಲ್ಲಿ ಇರುವುದು ಏನು ? ಉ : ಹತ್ತಿ

○ ○ ○

ಮಗ–ಅಪ್ಪಾ ಚೆಂಡು ಮಾಡಿಮೇಲೆ ಹೋಗಿದೆ ಹೇಗೆ ತೆಗೆಯಲಿ !

ಇನ್ನೊಬ್ಬಾತ ಗಂಟೆ ಎಷ್ಟಾಯಿತು.

ಉ : ಹತ್ತು

○ ಅಣ್ಣೆಚೀರ ಭಾರತಿ ಸೋಮಣ್ಣ
ಮಕ್ಕಂದೂರು.

# ಕರ್ತವ್ಯ ನಿಷ್ಠರಾದ ಆಮೆ ಮತ್ತು ಗಜರಾಜ ದಂಪತಿಗಳು

ಮುದ್ದು ರಾಜರು ಕಟ್ಟಿದ ಮಣ್ಣಿನ ಕೋಟೆ
ಟಿಪ್ಪುಸುಲ್ತಾನರ ಕಲ್ಲಿನ ಕೋಟೆ
ಅಂದಾಯಿತು ಆಂಗ್ಲ ದರ್ಬಾರಿನ ಕೋಟೆ
ಇಂದಾಯಿತು ನಮಗೆ ಕಣ್ಣೀರಿನ ಕೋಟೆ

ಮಡಿಕೇರಿ ಕೋಟೆ ಈ ದೇಶದ ಮಣ್ಣಿನ ಮಕ್ಕಳ ಪ್ರತೀಕ. ಅಂದು ಮಡಿಕೇರಿ ಕೋಟೆ ಜನರಿಗೆ ರಾಜರ ಅಭಯ ಹಸ್ತವಾಗಿತ್ತು. ಹೇಗೆ? ಕೋಟೆಗೆ ತಾರಿನ ರಸ್ತೆ ಅಂದಿರಲಿಲ್ಲ. ಇಂದಿನ ಮುಖ್ಯ ಹೆದ್ದಾರಿಯ ಮೂಲಕ ಕೋಟೆಯ ಹೆಬ್ಬಾಗಿಲು. (ಪೂರ್ವಾಭಿಮುಖ) ಇಂದು ಅದನ್ನು ಅಲ್ಲಾಡಿಸುವ ಸಾಮರ್ಥ್ಯ ನಮಗಿಲ್ಲ. ಅಂದು ಅದನ್ನು ತೆರೆಯುವುದು, ಮುಚ್ಚುವುದು ನಿತ್ಯ ಸಾಗುತಿತ್ತು.

ಈ ಹೆಬ್ಬಾಗಿಲಿಗಾಗಿ ಒಳಗೆ ಪ್ರವೇಶಿಸಿದರೆ ಮೊಟ್ಟಮೊದಲ ದೃಶ್ಯ ವಿಘ್ನೇಶ್ವರನ ಅಭಯಾಶೀರ್ವಾದ. ವಿಘ್ನೇಶ್ವರನಿಗೆ ಸಾಷ್ಟಾಂಗ ನಮಿಸಿ, ಮುನ್ನಡೆದರೆ ನಮ್ಮ ಬಲ ಭಾಗಕ್ಕೆ ಕಾಣಿಸುವುದು 2 ಆನೆಗಳು. ಇದಕ್ಕೊಂದು ಪಶ್ಚಾತ್ತಾಪದ ಕಥೆ ಇದೆ. ಅಂದು ಇಂದಿನಂತೆ ಅಲಾರಾಂ ಗಡಿಯಾರ ಇರಲಿಲ್ಲ. ಅದರ ಕೆಲಸವನ್ನು ಈ ಆನೆಗಳು ತಮ್ಮ ಜೀವನದಲ್ಲಿ ಮಾಡುತ್ತಿದ್ದವು. ಬೆಳಿಗ್ಗೆ ಮಹಾಜನರನ್ನು ಎಚರಿಸುತ್ತಿದ್ದವು. ಅಂತಾ ಶಿಸ್ತು, ಕಾರ್ಯ ಪ್ರಜ್ಞೆ ಇಂದು ಯಾರಿಗಿದೆ ? ದಿನವೂ ಎಂದೂ ಒಂದೇಸಮ ಇರುವುದಿಲ್ಲ. ಹೆಚ್ಚುಕಮ್ಮಿಯಾಗುವುದು. ಹಾಗೆಯೇ ಈ ಆನೆಗಳು ಒಂದು ದಿನ ಯಾವ ಕಾರಣಕ್ಕೋ ಏನೋ ರಾಜನನ್ನು ಎಬ್ಬಿಸಲಿಲ್ಲ. ತಮ್ಮ ಕರ್ತವ್ಯವನ್ನು ಮಾಡಲಿಲ್ಲ. ಕರ್ತವ್ಯದಲ್ಲಿ ವಿಫಲರಾದ ಕಾರಣ ಸಿಕ್ಕಿದ ಶಿಕ್ಷೆ ಪ್ರಾಣಹಾನಿ. ಕರ್ತವ್ಯಕ್ಕೆ ಅಂದು ಇದ್ದ ಮಹತ್ವ ಇದು. ಇದು ಅತಿಯಾಗಿರಬಹುದು. ಆದರೆ ಕರ್ತವ್ಯದ ಮಹತ್ವ ಅಷ್ಟಿತ್ತು. ಹಾಗೆಯೇ ಕರ್ತವ್ಯವನ್ನು ನೆನೆಸಿಕೊಳ್ಳುವುದು, ಕರ್ತವ್ಯಕ್ಕೆ ಸೂಕ್ಷ್ಮತೆಗಾಗಿ ಅದರ ನೆನಪಿಗಾಗಿ ಬುದ್ಧಿ ಮತ್ತು ತೀಕ್ಷ್ಣ ಬುದ್ಧಿಗೆ ಹೆಸರಾದ ಗಜರಾಜ ದಂಪತಿಗಳನ್ನು ಅದರ ನಿಜ ಸ್ವರೂಪ ಕೆಡದಂತೆ ನಿರ್ಮಿಸಿದ್ದಾರೆ.

ಕೋಟೆಯ ಮಧ್ಯೆ ಆಮೆ ಇದೆ. ಇದಕ್ಕೆ ಹಲವರು ಹಲವಾರು ಕಲ್ಪನೆಗಳನ್ನು ಕೊಡುತ್ತಾರೆ. ಕೆಲವರು ಅಂದಕ್ಕಾಗಿ ಎಂದರು, ಕೆಲವರು ಕಲಾಕೃತಿ ಎಂದರು, ಇನ್ನು ಹಲವರು ಸುರಂಗದ ಜ್ಞಾಪಕ ಎಂದರು. ಆದರೆ ಆಮೆಯು ಜನಸೇವೆಗಾಗಿ ಕೋಟೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವವರಿಗೆ ಸದಾ ಕರ್ಮ, ಕಾರ್ಯ, ಕಾಲಗಳ ಎಚ್ಚರಿಕೆ ಕೊಡುತ್ತಿರುತ್ತದೆ. ಅಂದಿನ ರಾಜಕಾರ್ಯಕ್ಕೆ ಈ ಆಮೆಯೇ ಪ್ರೇರಣೆ.

○ ಚೇಂದ್ರಿಮಾಡ ಜಿ. ಮುತ್ತಪ್ಪ, ಕುಶಾಲನಗರ.

## ವಿವೇಕವಾಣಿ: ಪ್ರಿಯ ವಿದ್ಯಾರ್ಥಿಗಳೇ

### ವಿದ್ಯಾರ್ಥಿ ಎಂದರೆ ಯಾರು ? ವಿದ್ಯಾರ್ಥಿ ಜೀವನದ ಗುರಿ ಏನು ?

ವಿದ್ಯೆಯನ್ನು ಅಭ್ಯಸಿಸುವವನು ಅಥವಾ ವಿದ್ಯಾರ್ಜನೆಯ ಉದ್ದೇಶ ಹೊಂದಿರುವವನು ವಿದ್ಯಾರ್ಥಿ ಎನಿಸುತ್ತಾನೆ. ಶಿಕ್ಷಣ ಅಥವಾ ವಿದ್ಯಾರ್ಜನೆಯು ಜೀವನ ಪರ್ಯಂತ ನಡೆಯುವ ಪ್ರಕ್ರಿಯೆ. ಆದುದ್ದರಿಂದ ವಿದ್ಯಾರ್ಥಿಗೆ ವಯಸ್ಸಿನ ಮಿತಿಯಿಲ್ಲ. ಕಲಿಯುವ ಮನಸ್ಸಿರುವ ಎಲ್ಲರೂ-ಹಣ್ಣು ಗಡ್ಡದ ಮುದುಕನೇ ಇರಲಿ, ಕಾಲೇಜಿನ ಹಿರಿಯ ಪ್ರಾಧ್ಯಾಪಕರೇ ಆಗಿರಲಿ, ನಿಜವಾಗಿಯೂ ಅವರೆಲ್ಲರೂ ವಿದ್ಯಾರ್ಥಿಗಳೆ.

ವಿದ್ಯಾರ್ಜನೆಯೇ ವಿದ್ಯಾರ್ಥಿ ಜೀವನದ ಗುರಿ. ಈ ವಿದ್ಯೆ ಎಂಬುದು ಕೇವಲ ಚೋಟುದ್ದ ಹೊಟ್ಟೆಪಾಡಿಗೆ ದಾರಿ ಮಾಡುವ ವಿದ್ಯೆ ಮಾತ್ರ ಆಗಿರದೆ, ಮಾನವನನ್ನು ಮಾಧವನನ್ನಾಗಿಸುವ ವಿದ್ಯೆ ಆಗಬೇಕು. ಅಂದರೆ ಅಂತರ್ಯದಲ್ಲಿರುವ ಆ ದೇವರ ದೈವೀಕತೆಯನ್ನು-ಪರಿಪೂರ್ಣತೆಯನ್ನು ಉದ್ದೀಪನಗೊಳಿಸಿಕೊಂಡು ತಮ್ಮ ವ್ಯಕ್ತಿತ್ವದ ಸರ್ವಾಂಗೀಣ ಅಭಿವೃದ್ಧಿಗೆ ಕಾರಣರಾಗಿ, ಯೋಗ್ಯ ವ್ಯಕ್ತಿಗಳಾಗುವುದೇ ವಿದ್ಯಾರ್ಥಿ ಜೀವನದ ಗುರಿ.

### ವಿದ್ಯಾರ್ಥಿ ಜೀವನದ ಗುರಿ ಔನ್ನತ್ಯದ್ದಾಗಿರಲಿ

ಇಡೀ ವಿದ್ಯಾರ್ಥಿ ಜೀವನದ ಗುರಿ ಒಂದು ಶಿಖರವಾದರೆ ಪ್ರತಿ ವರ್ಷದ ವಿದ್ಯಾಭ್ಯಾಸವೆಂದರೆ ಆ ಗುರಿಯೆಡೆಗೆ ಅಂದರೆ, ಆ ಶಿಖರದೆಡೆಗೆ ಸಾಗಿಸುವ ಮೆಟ್ಟಿಲುಗಳಿದ್ದಂತೆ. ಪ್ರತಿಯೊಂದು ಮೆಟ್ಟಿಲನ್ನು ಸಮರ್ಪಕವಾಗಿ ಏರಿದಾಗ ಮಾತ್ರ ಶಿಖರವನ್ನು ತಲುಪುವುದು ಸಾಧ್ಯವಾಗುವಂತೆ, ವರ್ಷ ವರ್ಷದ ವಿದ್ಯಾಭ್ಯಾಸ ಸಾಂಗವಾದಾಗ ಮಾತ್ರ ವಿದ್ಯಾರ್ಥಿ ಜೀವನದ ಗುರಿ ಸಾಧಿಸಲು ಸುಲಭ ಸಾಧ್ಯವಾಗುತ್ತದೆ.

ಸಾಮಾನ್ಯವಾಗಿ ಹೊಟ್ಟೆಪಾಡಿನ ದೃಷ್ಟಿಯಿಂದಲೇ ನಾಳೆ ಡಾಕ್ಟರಾಗಬೇಕು, ಬ್ಯಾಂಕ್ ಅಧಿಕಾರಿಯಾಗಬೇಕು, ಇಂಜಿ

[10ನೇ ಪುಟ ನೋಡಿ]

# ಆರೋಗ್ಯ ಚಿಂತನ

## ಮಾರಕ ರೋಗ ಕ್ಯಾನ್ಸರ್

'ಕ್ಯಾನ್ಸರ್' ಈ ಹೆಸರೇ ಇಂದು ಭೀತಿಯನ್ನು ಮೂಡಿಸುತ್ತದೆ. ಈ ರೋಗಕ್ಕೆ ನಿರ್ದಿಷ್ಟವಾದ ಕಾರಣವನ್ನು ಇಂದಿಗೂ ಕಂಡುಹಿಡಿಯಲಾಗಲಿಲ್ಲ. ವಾತಾವರಣ ಮಾಲಿನ್ಯ, ಕೆಲ ರಾಸಾಯನಿಕ ವಸ್ತುಗಳು ಬೀಡಿ, ಸಿಗರೇಟ್‌ಗಳ ಅತಿಯಾದ ಸೇವನೆ, ವಿಕಿರಣತೆ (X–ray), ಕೆಲವೊಂದು ಬಗೆಯ ವೈರಸ್‌ಗಳು ಇವುಗಳ ಪಾತ್ರ ಮಹತ್ವವಾಗಿದೆ.
ಎಂದು ನಂಬಲಾಗಿದೆ.

**ಕ್ಯಾನ್ಸರ್ ಕಾಯಿಲೆಯನ್ನು ಗುಣಪಡಿಸಬಹುದೆ ?**

ಕ್ಯಾನ್ಸರನ್ನು ಅತ್ಯಂತ ಮೊದಲ ಹಂತದಲ್ಲೇ ಗುರುತಿಸುವುದರಿಂದ ಗುಣಪಡಿಸಲು

ಡಾ॥ ಪ್ರವೀಣ ಎನ್.ಎಸ್. [ಎಂ.ಡಿ.]
ಮಡೆ, ಮಡಿಕೇರಿ

ಸಾಧ್ಯವಿದೆ. ಕ್ಯಾನ್ಸರ್ ತಡವಾಗಿ ಗುರುತಿಸಲ್ಪಟ್ಟರೂ ಸಹ ಇಂದಿನ ಆಧುನಿಕ ವೈದ್ಯ ಜಗತ್ತಿನಲ್ಲಿ ಹಲವಾರು ಬಗೆಯ ಚಿಕಿತ್ಸಾ ವಿಧಾನಗಳಿದ್ದು, ರೋಗಿಯು ಹಲವಾರು ವರ್ಷಗಳ ಕಾಲ ಬದುಕುಳಿಯುವಂತೆ ಮಾಡಬಹುದಾಗಿದೆ. ಆದ್ದರಿಂದ ಕ್ಯಾನ್ಸರ್ ಬಂದ ವ್ಯಕ್ತಿ ಭಯಪಟ್ಟು ನಿರಾಶೆಗೊಳ್ಳಬೇಕಾಗಿಲ್ಲ. ಧೈರ್ಯ, ಆತ್ಮವಿಶ್ವಾಸಗಳೊಂದಿಗೆ ಚಿಕಿತ್ಸೆ ಪಡೆದು ಸಾಧ್ಯವಾದಷ್ಟು ಕಾಲದವರೆಗೆ ನೆಮ್ಮದಿಯಿಂದ ಜೀವಿಸಬೇಕು.

**ಕ್ಯಾನ್ಸರ್ ಅಂಟುಕಾಯಿಲೆಯೆ ?**

ಕ್ಯಾನ್ಸರ್ ಅಂಟುಕಾಯಿಲೆಯಲ್ಲ. ಆದ್ದರಿಂದ ರೋಗಿಯ ಮನೆಯವರು, ಸಂಬಂಧಿಕರು ರೋಗಿಯ ಉಪಚಾರ ಮಾಡಲು ಯಾವುದೇ ಅಂಜಿಕೆ ಪಡಬೇಕಾಗಿಲ್ಲ.

**ಕ್ಯಾನ್ಸರ್ ರೋಗದ ಚಿಹ್ನೆಗಳೇನು ?**

ಇದು ಕ್ಯಾನ್ಸರ್ ಗೆಡ್ಡೆ ಯಾವ ಅಂಗದಲ್ಲಿ ಬೆಳೆಯುತ್ತಿದೆ ಎಂಬುದನ್ನು ಅವಲಂಬಿಸಿದೆ. ಒಂದೊಂದು ಅಂಗದ ಕ್ಯಾನ್ಸರ್‌ನ ಚಿಹ್ನೆ ಒಂದೊಂದು ತೆರನಾಗಿರುತ್ತದೆ.

* ಮಲದಲ್ಲಿ ಕಫದಲ್ಲಿ, ಮೂತ್ರದಲ್ಲಿ ರಕ್ತ ಕಾಣಿಸಿಕೊಳ್ಳುವಿಕೆ.

* ಹೆಂಗಸರಲ್ಲಿ ಮುಟ್ಟು ನಿಂತ ನಂತರವೂ ಋತುಸ್ರಾವವಾಗುವಿಕೆ, ಲೈಂಗಿಕ ಸಂಬಂಧ ಮಾಡಿದ ತಕ್ಷಣ ಯೋನಿಯಿಂದ ರಕ್ತಸ್ರಾವವಾಗುವಿಕೆ.

* ಯಾವುದೇ ಗೆಡ್ಡೆ ಅತಿ ಶೀಘ್ರದಲ್ಲಿ ದೊಡ್ಡದಾಗುವುದು.

* ಗಾಯ [ಹುಣ್ಣು] ಗುಣವಾಗದೆಯೆ ಅಧಿಕ ಕಾಲ ಇರುವುದು.

* ಬದಲಾದ ಸ್ವರ ಎರಡು ವಾರಗಳಿಗೂ ಅಧಿಕ ಕಾಲ ಇರುವುದು.

* ಜೀರ್ಣಕ್ರಿಯೆ ಸರಿಯಾಗದೆ ಮಲಬದ್ಧತೆ ಬಹಳ ಸಮಯದವರೆಗೆ ಇರುವುದು.

* ನುಂಗಲು ತೊಂದರೆ ಕಾಣಿಸಿಕೊಳ್ಳುವುದು.

* ದೇಹದ ಮೇಲಿದ್ದ ಮಚ್ಚೆ ದೊಡ್ಡದಾಗುವುದು. ಇತ್ಯಾದಿ

ಇವು ಕ್ಯಾನ್ಸರ್ ರೋಗದ ಕೆಲವು ಮೊದಲ ಚಿಹ್ನೆಗಳು. ಹೆಚ್ಚಿನ ಸಂದರ್ಭಗಳಲ್ಲಿ ಕ್ಯಾನ್ಸರ್ ದೇಹದೊಳಗೆ ಪ್ರಾರಂಭದಲ್ಲಿ ಯಾವುದೇ ಮುನ್ಸೂಚನೆಯಿಲ್ಲದೆ ಬೆಳೆಯುತ್ತಿದ್ದು, ಗುರುತಿಸಲ್ಪಡುವಾಗ ವ್ಯಕ್ತಿ ಅಪಾಯದ ಅಂಚಿನಲ್ಲಿರುತ್ತಾನೆ.

**ಔಷಧೋಪಚಾರ :**

ಮೊದಲ ಹಂತದಲ್ಲಿ ಗುರುತಿಸಲ್ಪಡುವ ಕ್ಯಾನ್ಸರ್ ಗೆಡ್ಡೆಗಳನ್ನು ಶಸ್ತ್ರಚಿಕಿತ್ಸೆಯ ಮೂಲಕ ಕತ್ತರಿಸಿ ತೆಗೆಯುತ್ತಾರೆ. ಕೊನೆ ಹಂತದಲ್ಲಿ ವಿಕಿರಣ ಶಾಖ (Radiotherapy) ನೀಡಬಹುದಷ್ಟೆ. ಕ್ಯಾನ್ಸರ್ ಕೋಶಗಳು ವಿಭಜನೆಯಾಗದೆ ಹರಡದಂತೆ ತಡೆಯಲು ಅತ್ಯಂತ ಪರಿಣಾಮಕಾರಿಯಾದ ಹಲವಾರು ಔಷಧಗಳು (Chemotherapy) ಇಂದು ಲಭ್ಯವಿದೆ.

**ರೋಗದ ತಡೆ ಹೇಗೆ ?**

ಕೆಲವೊಂದು ಅಂಶಗಳನ್ನು ಪಾಲಿಸುವುದರಿಂದ ಸ್ವಲ್ಪಮಟ್ಟಿಗೆ ಈ ರೋಗದಿಂದ ದೂರವಿರಲು ಸಾಧ್ಯವಿದೆ.

1. ಬೀಡಿ, ಸಿಗರೇಟು, ಮದ್ಯಪಾನ ಚಟವಿಲ್ಲದಿರುವುದು.

2. ಹೊಗೆಸೊಪ್ಪು ಜಗಿಯುವ ಅಭ್ಯಾಸವಿಲ್ಲದಿರುವುದು.

3. ಬಾಯಿಯನ್ನು ಸ್ವಚ್ಛವಾಗಿರುವಂತೆ ನೋಡಿಕೊಳ್ಳುವುದು. ಹಾಗೆಯೇ ಹರಿತವಾದ ಹಲ್ಲು ನೋವುಂಟುಮಾಡುತ್ತಿದ್ದಲ್ಲಿ ದಂತವೈದ್ಯರ ಸಲಹೆ ಪಡೆಯುವುದು.

4. ಅತಿಯಾದ ಬಿಸಿಆಹಾರ, ಪಾನೀಯ ಸೇವಿಸದಿರುವುದು.

5. ಆಹಾರದಲ್ಲಿ ತರಕಾರಿ, ಸೊಪ್ಪಿನ ಅಂಶಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟು ಕೊಬ್ಬಿನ ಅಂಶ ಕಡಿಮೆ ಮಾಡುವುದು.

6. ಸಮಯಕ್ಕೆ ಸರಿಯಾಗಿ ಆಹಾರ ತೆಗೆದುಕೊಳ್ಳುವಿಕೆ. ಹಾಗೆಯೇ ಜೀರ್ಣಕ್ರಿಯೆಯಲ್ಲಿ ಏರುಪೇರಾಗಿದ್ದು ಬಹಳ ಸಮಯದವರೆಗೆ ಇದ್ದಲ್ಲಿ ವೈದ್ಯರ ಸಲಹೆ ಪಡೆಯುವುದು.

[10ನೇ ಪುಟ ನೋಡಿ]

## ಉದಯ ರವಿ ಶಶಿ

ಸೂರ್ಯೋದಯಕ್ಕೆ ವಂದಿಸುವೆ
ಚಂದ್ರೋದಯಕ್ಕೆ ಚುಂಬಿಸುವೆ
ಎತ್ತಲು ಹಸಿರೆಲೆ ಮರಗಳ ಸಾಲಲಿ
ಸುತ್ತಲು ಬೆಟ್ಟಗಳ ಅಲೆಗಳ ಮಧ್ಯೆ
ಸೂರ್ಯೋದಯವಾಗುತ್ತಿದ್ದೆ.

ಮರಗಳ ಮರೆಯಲಿ
ಚಂದ್ರನ ಬೆಳಕು ಚುಮ್ಮುತ್ತಿದೆ
ಮಾವಿನ ಮರಗಳ ಚಿಗುರನು ನೋಡು
ಮುದ್ದಿನ ಮಕ್ಕಳ ಲಾಲಿಯ ಹಾಡು
ಮತ್ತಿವನು ತರುತಲಿವೆ ಮನಕ್ಕೆ
ಶಾಂತಿಯ ನೀಡುತ್ತಿದೆ.

ಉರಿಯುವ ದೀಪವ ಮನೆಯಲಿ ನೋಡು
ಹಸು ಕಂದಗಳ ಮಾತನು ಕೇಳು
ಆನಂದ ಉಕ್ಕುತ್ತಿದೆ ಬದುಕಲಿ
ಸಂತಸ ತುಂಬುತ್ತಿದೆ.

ಮೇಘಗಳೊಂದಾಗಿ ಮಳೆಯನು ತರಲಿ
ಪ್ರಣಯಗಳೊಂದಾಗಿ ಕಂದನು ಜನಿಸಲಿ
ಕತ್ತಲು ಬೆಳಕಿನ ಅರ್ಥವು ದೊರೆಯಲು
ಬದುಕು ಸಾರ್ಥಕವಾಗುವುದು
ಬಾಳು ಚಿರವಾಗುಳಿಯುವುದು.

ಸಂಗ್ರಹ : **ಕೊಂಬಾರನ ಭವಾನಿ ಮಹೇಶ,** ಹುದುಗೂರು

## ಮನುಷ್ಯನ ಸ್ವಾಭಾವಿಕ ಗುಣಲಕ್ಷಣಗಳು

1. ತನ್ನೊಳಗೆ ನಗುವವನು—**ಜ್ಞಾನಿ**
2. ತನ್ನಿಂದ ತಾನೇ ನಗುವವನು—**ಹುಚ್ಚ**
3. ತನ್ನ ಗೆಳತಿಯ ನೆನೆದು ನಗುವವನು—**ಪ್ರೇಮಿ**
4. ಮೈಮರೆತು ನಗುವವನು—**ರಸಿಕ**
5. ಇನ್ನೊಬ್ಬರಿಗಾಗಿ ನಗುವವನು—**ಅಯೋಗ್ಯ**
6. ಇನ್ನೊಬ್ಬರನ್ನು ನೋಡಿ ನಗುವವನು—**ಗರ್ವಿ**
7. ಇನ್ನೊಬ್ಬರಿಗೆ ನೋವಾಗುವಂತೆ ನಗುವವನು —**ಖಳನಾಯಕ**
8. ನಕ್ಕು ಮನರಂಜನೆ ನೀಡುವವನು—**ವಿಧೂಷಕ**
9. ಗೆದ್ದರೂ ನಗದವನು—**ಕರ್ಮಯೋಗಿ**
10. ನಗುತ್ತಲೇ ವಿಜಯ ಸಾಧಿಸುವವನು—**ಬುದ್ಧಿವಂತ**

**ಇದರಲ್ಲಿ ನೀವ್ಯಾರು ?**

○ **ಕಾಚಿಲಾಂಡ ಅಶೋಕ್,** ಬೆಂಗಳೂರು.

## ಮನೆತನದ ಪದಬಂಧ

**ಸೂಚನೆ :** ಈ ಪದಬಂಧದಲ್ಲಿ ನಮ್ಮ ಗೌಡ ಜನಾಂಗದ ಕೆಲವು ಮನೆತನದ ಹೆಸರು ಅಡಗಿದೆ.

| | | | | | | | |
|---|---|---|---|---|---|---|---|
| 1 | | | 2 12 | | | | 15 |
| 3 | | | | ■ | ■ | 14 | |
| 4 | | | | 13 | ■ | | |
| 5 | | | 6 | | | | 17 |
| ■ | 7 | | ■ | 8 | | | |
| ■ | ■ | 9 | | | ■ | 16 | |
| 10 | | | | | ■ | | |
| ■ | ■ | ■ | 11 | | | | |

**ಎಡದಿಂದ ಬಲಕ್ಕೆ :**

1. ಮುಂಗಾರಿನ ಮೊದಲಲ್ಲಿ 'ನ' ಬಂದಿದೆ–3
2. ದೇವರ ಗುಡಿಗೆ ಓಡೋಡಿ ಬಂದೆ–4
3. ಮುಂದೆ ಮುಂದೆ ಓಡಿ–3
4. ನಿಮ್ಮ ಮನೆಯನ್ನು ಚೊಕ್ಕವಾಗಿಡಿ-3
5. ಕರ್ಣನಂತೆ ಕರುಣಾಮಯಿ–4
6. ಈ ನಡುವೆ ಭೇಟಿಯೇ ನಡೆಯಲಿಲ್ಲ–4
7. ಟಪಾಲಿಗೆ ಇನ್ನೊಂದು ಹೆಸರು–2
8. ಡೋಲು ಬಾರಿಸಿಕೊಂಡು ಪಾಡ್ದನ ಹೇಳುವರು–4
9. ಕೊಡವ ಭಾಷೆಯಲ್ಲಿ ಕೇಳಿ ತೆಗೆದುಕೊಳ್ಳಿ–3
10. ಕುಂಭಮೇಳದಲ್ಲಿ ಗೌಡ–5
11. ಉಳುವವನೆ ವಾರಸುದಾರ–5

**ಮೇಲಿನಿಂದ ಕೆಳಕ್ಕೆ :**

12. ದೇವರಂತ ಜನರು–4
13. ಉಡುಗೆಗೆ ಧೂಳು ಹತ್ತಿತು–4
14. ಪೊನ್ನಪ್ಪನನ್ನು ಅಟ್ಟಿಸಿಕೊಂಡು ಹೋದರು–3
15. ಅಬ್ಬಾ ! ಪಟ್ಟಣದಲ್ಲಿ ಎಂಥಹ ಕಟ್ಟಡ–3
16. ನೀವು ಯಾರ ಪೈಕಿ ?–3
17. ಅಪ್ಪನನ್ನೇ ತಡಿಯಲು ಹೇಳಿದ–5

(ಉತ್ತರ ಮುಂದಿನ ಸಂಚಿಕೆಯಲ್ಲಿ)

● **ಉಳುವಾರನ ಸುರೇಶ್ ಕುಮಾರ್,** ನಿಪ್ಪಾಣಿ

## ಗೌಡರ ವಿವಾಹ ಪದ್ಧತಿಯ ಶೋಬಾನೆಗಳು

### 4 ಅ) ಹಸೆ ಬರೆಯುವ ಹಾಡು :

ಅಪ್ಪಾ ಮಕ್ಕಳು ಕೂಡಿ ತುಪ್ಪ ಬೋನವನುಂಡು ಉಕ್ಕಿನುಳಿ ಬಾಜು ಹೆಗಲೇರಿ । ಉಕ್ಕಿನುಳಿಬಾಜು ಹೆಗಲೇರಿ ಒಳ್ಳೊಳ್ಳೆ ಮಣೆ ಕಡಿವ ಕೆಲಸಕ್ಕೇ ॥ ಅಣ್ಣಾ ತಮ್ಮಂದಿರು ಕೂಡಿ ಹಾಲು ಬೋನವನುಂಡು ಚಿನ್ನಾದುಳಿಬಾಜು ಹೆಗಲೇರಿ । ಚಿನ್ನಾದುಳಿ ಬಾಜು ಹೆಗಲೇರಿ ಹೊರುಟಾರು ಒಳ್ಳೊಳ್ಳೆ ಮಣೆ ಕಡಿವ ಕೆಲಸಕ್ಕೇ ॥ ಆಲದ ಮಣೆಗೇಳಿ ಆರೇಳು ದಿನವಾದೊ ಆಲದ ಮಣೆಯಾಕೆ ಬರಾಲಿಲ್ಲಾ । ಆಲದ ಮಣೆಯಾಕೆ ಬರಲಿಲ್ಲ ಬೆಡಗಿನ ಮಣೆಯು ಊರಿಗೆ ಬಿಟ್ಟ ಹೋರಿನ ಹೊಡಕೊಡೀ । ಊರಿಗೆ ಬಿಟ್ಟ ಹೋರಿನ ನಾವೇಕೆ ಹೊಡಕೊಡಲೋ ಜಾವಾದಲೆದ್ದು ಕೆಲಸಾಕ್ಕೆ ॥ ಹಲಸಿನ ಮಣೆಗೇಳಿ ಹತ್ತೆಂಟು ದಿನವಾದೊ ಹಲಸಿನ ಮಣೆಯಾಕೆ ಬರಾಲಿಲ್ಲಾ । ಹಲಸಿನ ಮಣೆಯಾಕೆ ಬರಲಿಲ್ಲ ಬೆಡಗಿನ ಮಣೆಯು ಊರಿಗೆ ಬಿಟ್ಟ ಹಸುನ ಹೊಡಕೊಡೀ । ಊರಿಗೆ ಬಿಟ್ಟ ಹಸುವ ನಾವೇಕೆ ಹೊಡಕೊಡಲೋ ಸಮತಿಗದು ಮುಡಿವಾಗ ಬೆಳಗಾದೋ ॥ ಗಂಧದ ಮಣೆಗೇಳಿ ತಿಂಗಳು ದಿನವಾದೋ ಗಂಧದ ಮಣೆಯಾಕೆ ಬರಾಲಿಲ್ಲಾ । ಗಂಧದ ಮಣೆಯಾಕೆ ಬರಲಿಲ್ಲ ಬೆಡಗಿನ ಮಣೆಯು ಊರಿಗೆ ಬಿಟ್ಟೆಮ್ಮೆ ಹೊಡಕೊಡೀ । ಊರಿಗೆ ಬಿಟ್ಟೆಮ್ಮೆ ನಾವೇಕೆ ಹೊಡಕೊಡಲೋ ಮಲ್ಲಿಗೆಯ ಮುಡಿವಾಗ ಬೆಳಗಾದೋ ॥ ಹಸೆ ಬರೆವ ಕೋಣೇಲಿ ಏನುಂಟು, ಏನಿಲ್ಲ, ಹಣ್ಣಡಿಕೆ ಸಿಪ್ಪೆ ಮೊದಾಲಿಲ್ಲಾ । ಹಣ್ಣಡಿಕೆ ಸಿಪ್ಪೆ ಮೊದಲಿಲ್ಲದ ಕೋಣೇಲಿ ಹಸೆ ಬರೆವ ಕೋಣೆ ಬಲು ಇಂಬು ॥ ಹಸೆ ಬರೆವ ಜಗುಲಲ್ಲಿ ಏನುಂಟು । ಏನಿಲ್ಲ ಯಾಲಕ್ಕಿ ಸಿಪ್ಪೆ ಮೊದಾಲಿಲ್ಲಾ । ಯಾಲಕ್ಕಿ ಸಿಪ್ಪೆ ಮೊದಲಿಲ್ಲ ಜಗುಲಲ್ಲಿ ॥ ಹಸೆ ಬರೆವ ಜಗಲಿ ಬಲು ಇಂಬು ॥ ಹಸೆಯ ಮೇಲೆರಡು ಕಳಸವ ತಂದಿಡಿರಿ, ನಡೆದ ಮಗಳಿಗೂ ಮಹಾ ದೇವಂಗೂ ಬಾಸಿಂಗದ ಬಣ್ಣ ಬರೀರಣ್ಣಾ । ಹಸೆಯ ಮೇಲೆರಡು ಹಸೆಮಣೆ ತಂದಿಡಿರಿ. ನಡೆದ ಮಗಳಿಗೂ ಮಹಾದೇವಂಗೂ ತುಂಡಲು ಬಣ್ಣಾ ಬರೀರಣ್ಣಾ ॥ ಹಸೆಯಾ ಬರಿಯಲಿಕೆ ಋಷಿಗಳು ನಾವು ಬಂದಿದ್ದೇವೆ ಚಂದಾಗಿ ಬರೆಯೀರಿ ಚೌಕಾಗಿ । ಹಸೆಯ ಬರೆಯಲಿಕೆ ಇನ್ಯಾರು ಬರಬೇಕು ತಾಯಿ ಸೋದರದ ಹಿರೀ ಬಾವ । ತಾಯಿ ಸೋದರದ ಹಿರಿಬಾವ ಬರಬೇಕೆಂದು ಚಂದಾಗಿ ಬರೆಯೀರಿ ಚೌಕಾಗಿ ॥ ಸೂರ್ಯ ದೇವರ ಅಕ್ಕ ಬರುತ್ತಾಳೆಂದು ಚಂದಾಗಿ ಬರೆಯೀರಿ ಚೌಕಾಗಿ । ಚಂದ್ರದೇವರ ತಂಗಿ ಬರುತ್ತಾಳೆಂದು ಚಂದಾಗಿ ಬರೆಯೀರಿ ಚೌಕಾಗಿ ॥ ಆ ಬಣ್ಣ ಬರೀರಣ್ಣಾ ಈ ಬಣ್ಣ ಬರೀರಣ್ಣಾ ಸೂರ್ಯದೇವರ ಬಣ್ಣ ಬರೀರಣ್ಣಾ । ಆ ಬಣ್ಣ ಬರೀರಣ್ಣ ಈ ಬರೀರಣ್ಣಾ, ಚಂದ್ರಾ ದೇವರ ಬಣ್ಣ ಬರೀರಣ್ಣಾ । ಗಿಳಿರಾಮರ ಬಣ್ಣ ಬರಿರಣ್ಣಾ ಚಂದಾಗಿ ಬರೆಯೀರಿ ಚೌಕಾಗಿ ॥ ಮಾವನರ ಮನೇಲೀಭಾವ ಮೈದುನರು ಬಲು ಹೆಚ್ಚು, ಹಸೆ ನೋಡಿ ನಿಮ್ಮ ಜರೆದಾರು । ಅತ್ತೇಯ್ಯ ಅರಮನೇಲೀ ಅತ್ತಿಗೆಯರು ಬಲುನಾದುನಿ ಹೆಚ್ಚು ಹಸೆನೋಡಿ ನಿಮ್ಮ ಜರೆದಾರು । ಚಂದಾಗಿ ಬರೆಯೀರಿ ಚೌಕಾಗಿ ॥ ಹಸೈ ಬರೆದವರಿಗೆ ಏನೆಲ್ಲಾ ಉಂಬಳಿ? ಸಣ್ಣಕ್ಕಿಬಯಲು ಸಮ್ಮಾ ಉಂಬಳಿ । ಹಸೆ ಬರೆದವರಿಗೆ ಏನೆಲ್ಲಾ ಉಡುಗೊರೆ ? ಸಾಲು ಪಟ್ಟೆಗಳು ಸಮ್ಮಾ ಉಡುಗೋರೇ । ಹಸೆಯ ಬರೆದವರಿಗೆ ಏನೆಲ್ಲಾ ವೀಳ್ಯಗಳು ? ತಟ್ಟೇಲಿ ವೀಳ್ಯವ ಮಡಾಗಿರಿ॥

### ಆ) ಹಸೆ ಬರೆಯುವ ಹಾಡು :

ಮುತ್ತಿನ ಮಂಟಪದಲಿ ಸ್ತ್ರೀಯರು ಐವರು, ಸರಿಯಾಗಿ ಹಸೆಯ ಬರೆದಾರು। ಸರಿಯಾಗಿ ಹಸೆಯ ಬರೆದಾರು ಬಾಲೆಯರು, ಸಿರಿದೇವಿ ಪತಿಯೇ ಹಸೆಗೇಳು ॥ ಕಾಲುಂಗುರ ತಿರಪಿಗೆ ಕಾಲುಂದುಗೆ ಗಿನಿರವದಿ–ಮೇಲೆ ದುಂದುಭಿ ಧ್ವನಿಯಲಿ । ಮೇಲೆ ದುಂದುಭಿ ಧ್ವನಿಯಲಿ ಜಾನಕಿ ವನಜೆ ಜಾನಕಿ ಹಸೆಗೇಳು ॥ ಬಳಕಿ ಹೊಂಬಾಳೆ ಹೊಳೆಯುವ ಪದಕದ ಮೇಲೆ, ಮಲಕು ಮುತ್ತಿನ ಒಲಿಮಾಲೆ । ಮಲಕು ಮುತ್ತಿನ ಒಲಿಮಾಲೆ ಧರಿಸಿರುವ, ನಾರಿ ಜಾನಕಿ ಹಸೆಗೇಳು ॥ ಗುಂಡು ಗುಲಗಂಜಿ ಸರವ, ಗುಂಡು ಮುತ್ತಿನ ಸರವ, ಬಂಧಿಯ ಮೇಲೆ ನವರತ್ನ । ಬಂಧಿಯ ಮೇಲೆ ನವರತ್ನ ಧರಿಸಿರುವ, ನಾರಿ ಜಾನಕಿ ಹಸೆಗೇಳು ॥ ಮುತ್ತಿನ ಮೂಗುತ್ತಿ, ಮುಡಿದಂಡೆ ಹೂವು ಜಾಜಿ, ಜಾಜಿ ಮಲ್ಲಿಗೆ ತುರಾಬಿಗೆ । ಜಾಜಿ ಮಲ್ಲಿಗೆ ತುರುಬೀಗೆ ಸೀತಮ್ಮ, ಪುತ್ತಳಿ ಜಾನಕಿ ಹಸೆಗೇಳು ॥ ದಶರಥ ಧೀರಾಧಿಗಳ ನೆನೆಸಿಕೊಂಡು ಮನೆ ಮುಂದೆ, ಮನೆ ಮುಂದೆ ಸತಿಗಿದ್ದ ರಾಮ ಹಸಗೇಳು ॥

(ಮುಂದುವರೆಯುವುದು)

### ಕವನ

ಸರ್ವರಲ್ಲಿ ಸಂಪಿಗೆಯಾಗಿ
ಮರ್ಯಾದೆಯಲ್ಲಿ ಗುಲಾಬಿಯಾಗಿ
ಮಮತೆಯಲ್ಲಿ ಮಾತೆಯಾಗಿ
ಕೈ ಹಿಡಿದವರ ಕಣ್ಮಣಿಯಾಗಿ
ಜಗತ್ತಿಗೆ ಜಗನ್ಮಾತೆಯಾಗಿ
ಎಲ್ಲರ ಸಂಗಾತಿಯಾಗಿ
ಕೊಡಗು ಸಂಗಾತಿ ಬಾಳು ಬೆಳಗಲಿ

○ ಕುಟ್ಟಮಣೆಯನ ರುಕ್ಮಿಣಿ ತಮ್ಮಯ್ಯ
ಮೊಣ್ಣಂಗೇರಿ.

## ಸ್ನೇಹದ ಮಹತ್ವ

ಯಾರಲ್ಲಿ ಮನುಷ್ಯತ್ವ ಇರುವುದೋ ಅವರಿಗೆ, ತನ್ನಂತೆಪರರು ಎಂಬ ಭಾವನೆ ಇರುತ್ತದೆ. ದ್ವೇಷ ವೈಷಮ್ಯ ಇರುವುದಿಲ್ಲ. ಒಬ್ಬ ಒಳ್ಳೆಯ ಸ್ನೇಹಿತನನ್ನು ಪಡೆಯ ಬೇಕಾದರೆ ನೀನೊಬ್ಬ ಒಳ್ಳೆಯ ಸ್ನೇಹಿತನಾಗಿರು. ಸ್ನೇಹ ಎಂಬ ಪದದ ಅರ್ಥ ವಿಶಾಲ ವಾದ ಸಾಗರ. ಈ ಬಾಂಧವ್ಯ ಅಂತರಂಗದ ಬೆಸುಗೆಯಾಗಿದ್ದು ಸ್ನೇಹಕ್ಕೆ ಬಾಲ್ಯ, ಪ್ರೌಢ, ಯೌವನ, ಮುಪ್ಪು ಇವುಗಳ ಅಂತರವಿರುವುದಿಲ್ಲ. ನಿಜವಾದ ಸ್ನೇಹ ಯಾವುದೇ ಕಾಲಕ್ಕೂ ಆಕರ್ಷಣೆ ಕಳೆದುಕೊಳ್ಳದ ಬೆಸುಗೆ.

ಒಬ್ಬ ವ್ಯಕ್ತಿಯ ವ್ಯಕ್ತಿತ್ವ ಅವನಿಗಿರುವ ಸ್ನೇಹಿತರಿಂದ ಗುರು ತಿಸಲ್ಪಡುತ್ತದೆ. ಈ ಸ್ನೇಹಕ್ಕೆ ಅಂತರಂಗದ್ದ ನೋವು, ನಲಿವು ಗಳಿಗೆ ಸ್ಪಂದಿಸುವುದಷ್ಟೆ ಅಲ್ಲದೆ ಕಷ್ಟ ಸುಖಗಳೆರಡನ್ನೂ ಹಂಚಿ ಕೊಳ್ಳುವ ಶಕ್ತಿಯಿರುತ್ತದೆ. ಈ ಸಂಬಂಧಕ್ಕೆ ಮಿಗಿಲಾದ್ದು ಇನ್ನೊಂದಿರಲಾರದು. ನಾವು ಬಯಸುವ ಸ್ನೇಹ, ಅಂದ, ಚೆಂದ ರೂಪ, ಐಶ್ವರ್ಯ, ಅಂತಸ್ತು, ಅಧಿಕಾರ, ಜನಪ್ರಿಯತೆ ನೋಡಿ ಸ್ನೇಹ ಸಂಪಾದಿಸ ಹೊರಡುತ್ತೇವೆ. ಆದರೆ ನಿಜವಾದ ಸ್ನೇಹಕ್ಕೆ ಬೇಕಾದ ಮಿಡಿಯುವ ಅಂತಃಕರಣ ಸ್ಪಂದಿಸುವ ವಿಶಾಲ ಹೃದಯ, ಕಲ್ಮಶವಿಲ್ಲದ ಬಿಚ್ಚು ಮನಸ್ಸು ಇರುತ್ತದೆ. ಹೃದಯ ಹೃದಯಗಳು ಮಾತಾಡಿಕೊಳ್ಳುತ್ತವೆ.

ಸ್ನೇಹವೊಂದು ನಿಗೂಢ ನಿಸ್ವಾರ್ಥ ನಿರ್ಮಲವಾದ ಭಾವನೆ

○ ಮುಕ್ಕಾಟಿ ಲತಾ ತಿಮ್ಮಯ್ಯ, ಮೈಸೂರು.

[6ನೇ ಪುಟದಿಂದ ಮುಂದುವರಿದುದು]

### ಪ್ರಿಯ ವಿದ್ಯಾರ್ಥಿಗಳೇ

ನಿಯರಾಗಬೇಕು...ಎಂಬೆಲ್ಲಾ ದೂರಾಲೋಚನೆಗಳಿಂದಲೇ ಕಲಿ ಕೆಯ ದಾರಿಯನ್ನು ವಿದ್ಯಾರ್ಥಿ ಆರಿಸಿಕೊಳ್ಳುತ್ತಾನೆ. ಡಾಕ್ಟರ್ ಆಗುವ ಮಹತ್ವಾಕಾಂಕ್ಷೆಯುಳ್ಳ ವಿದ್ಯಾರ್ಥಿ ವಿಜ್ಞಾನ ಸಕ್ತ ನಾದರೆ, ಬ್ಯಾಂಕ್ ಅಧಿಕಾರಿಯಾಗುವ ಹಂಬಲ ಇರುವವ ವಾಣಿಜ್ಯ ಶಾಸ್ತ್ರವನ್ನಾಯ್ದುಕೊಳ್ಳುತ್ತಾನೆ. ಇಂಜನಿಯರ್ ಆಗಬಲ್ಲ ವ್ಯಕ್ತಿ ಸಹ ವಿಜ್ಞಾನ ವಿಚಾರವನ್ನಾಯ್ದುಕೊಂಡು ಅಧ್ಯಯನದಲ್ಲಿ ತೊಡಗುತ್ತಾರೆ. ಇಲ್ಲಿ ಶ್ರೇಷ್ಠ ವೈದ್ಯನಾಗಬೇಕು, ಉತ್ತಮ ಅಧಿಕಾರಿಯಾಗಬೇಕು, ಉದ್ಧಾಮ ಇಂಜನಿಯರ್ ಆಗಬೇಕು ಎನ್ನುವುದು ಅಪ್ರದೂರದಗುರಿ. ಆದರೆ ವರ್ಷದ ವಿದ್ಯಾ ಭ್ಯಾಸದಲ್ಲಿ ಅವರವರ ಆಸಕ್ತಿ ವಿಚಾರದಲ್ಲಿ ಪರಿಪೂರ್ಣತೆಯನ್ನು ಸಾಧಿಸುವುದಾಗಿದೆ. ಈಗಿನ ಶಿಕ್ಷಣ ಕ್ರಮದಲ್ಲಿ ಪರೀಕ್ಷೆಯಲ್ಲಿ ಗಳಿಸುವ ಅಂಕಗಳೇ ಉತ್ಕೃಷ್ಟತೆಯ ಅಳತೆಗೋಲಾದುದರಿಂದ ಆಯಾಯ ವರ್ಷದ ಅವರ ವಿಶೇಷ ಆಸಕ್ತಿ, ವ್ಯಾಸಂಗ ವಿಚಾರ ಗಳಲ್ಲಿ ಅತೀ ಹೆಚ್ಚು ಅಂಕಗಳನ್ನು ಗಳಿಸುವುದೇ ಅವರ ವಾರ್ಷಿಕ ಗುರಿ ಆಗಿರಬೇಕು.

ಗೌಡ ಸಾರಸ್ವತ ಲೋಕದ ಮಹಾ ವಿದ್ಯಾರ್ಥಿಗಳೇ, ನಿಮ್ಮ ಗುರಿಯೂ ಸಹ ಒತ್ತಟ್ಟಿಗಿದ್ದು ಸಾಧಿಸುವ ದಿಶೆಯಲ್ಲಿ ಕಾರ್ಯ ತತ್ಪರರಾಗಬೇಕು. ಅದುವೇ ನಮ್ಮ ಮುಂದಿನ ಯುವ ಜನಾಂ ಗದ ಗುರಿಯಾಗಿ ಮಾರ್ಪಟ್ಟರೆ ಇದಕ್ಕಿಂತ ಹೆಚ್ಚಿನದೇನು ಬೇಕು ನಮಗೆ.......

○ ಪಟ್ಟಡ ಪ್ರಭಾಕರ, ಮೈಸೂರು.

[7ನೇ ಪುಟದಿಂದ ಮುಂದುವರಿದುದು]

7. ಎಲ್ಲ ರೀತಿಯ ರಾಸಾಯನಿಕ ವಸ್ತುಗಳ ನಿತ್ಯ ಸಂಪರ್ಕ ದಿಂದ ದೂರವಿರುವುದು.

8. ಗರ್ಭಿಣಿ ಸ್ತ್ರೀ ಎಕ್ಸರೇ ತೆಗೆಸಿಕೊಳ್ಳದೆ ಇರುವುದು.

9. ಗರ್ಭಕೋಶದ ಕ್ಯಾನ್ಸರ್ ಪತ್ತೆ ಹಚ್ಚಲು ಅತ್ಯಂತ ಸರಳ ಪರೀಕ್ಷೆಯಾದ 'ಪ್ಯಾಪ್ ಸ್ಮೀಯರ್' [Pap smear] ಪರೀಕ್ಷೆಯನ್ನು ಎಲ್ಲಾ ಹೆಂಗಸರೂ ಮೂರು ವರ್ಷಕ್ಕೊಮ್ಮೆ ಮಾಡಿಸಿಕೊಳ್ಳುವುದು.

10. ಹೆಂಗಸರು ಸ್ವತಃ ತಮ್ಮ ಸ್ತನಗಳನ್ನು ಮುಟ್ಟಿ ಯಾವುದಾದರು ಗೆಡ್ಡೆ ಇದೆಯೇ ಎಂಬ ಬಗ್ಗೆ ಪರೀಕ್ಷಿಸಿಕೊಳ್ಳು ವುದು.

11. ಯಾವುದೇ ತೊಂದರೆ ಬಹಳ ಸಮಯದಿಂದ ಇದ್ದಲ್ಲಿ ನಿರ್ಲಕ್ಷಿಸದೆ ವೈದ್ಯರ ಸಲಹೆ ಪಡೆಯುವುದು.

## ಜೀವನ

ಮೊದ ಮೊದಲು ಜೀವನ ಒಂದು
ಸುಂದರ ಬಯಲು ರಂಗ ಎಂದೆನಿಸಿತ್ತು,
ಆಗ ನನ್ನಲ್ಲಿ ಅನೇಕ ಆಸೆ ಆಕಾಂಕ್ಷೆಗಳು ಹುಟ್ಟಿತ್ತು,
ಆ ಆಸೆ ಆಕಾಂಕ್ಷೆಗಳನ್ನು ನಾನು ಸಾಧಿಸಬಲ್ಲೆ
ಎಂದು ಕೊಂಡೆ.
ಕಾಲ ಕಳೆದಂತೆ ನನಗೆ ತಿಳಿಯಿತು,
ಜೀವನ ಒಂದು ಕ್ಷಣಿಕ ಎಂದು,
ನನ್ನಲ್ಲಿದ್ದ ಆಸೆ ಆಕಾಂಕ್ಷೆಗಳು ಮಾಯವಾದವು.
ಮನದಲ್ಲಿ ದುಃಖಗಳೇ ತುಂಬಿಕೊಂಡವು.
ಜೀವನದ ಹೋರಾಟದಲ್ಲಿ ನನ್ನ ಆಸೆ
ಆಕಾಂಕ್ಷೆಗಳೆಲ್ಲವು ಮಣ್ಣುಪಾಲಾದವು.
ನಾ ಏನೆಂದು ಹಾಡಲಿ ಈ ಜೀವನದ ಕಥೆಯ
ನಾ ಹೇಗೆ ಬರೆಯಲಿ ಈ ವಿಧಿ ವ್ಯಥೆಯ ?

○ ಪಡಿಕಲ್ ಸುನಿತ ಚಿಣ್ಣಪ್ಪ, ಗೋಣಿಕೊಪ್ಪಲು.

## ಶಾಪ ಪಡೆದ ಕೋಳಿ

ಭಾರತ ಅತಿಥಿ ಸತ್ಕಾರಕ್ಕೆ ಹೆಸರಾದ ದೇಶ. 'ಅತಿಥಿ ದೇವೋಭವ' ಎನ್ನುವ ಮಾತು ಅತಿಥಿ ಸತ್ಕಾರದ ಮಹತ್ವವನ್ನು ತಿಳಿಸುತ್ತದೆ. 'ಅತಿಥಿ' ದೇವರಿಗೆ ಸಮಾನ ಎಂದು ಪ್ರಾಚೀನ ಭಾರತೀಯರು ನಂಬಿದ್ದರು.

ಮಾಂಸಾಹಾರಿಗಳು, ತಮ್ಮ ಮನೆಗೆ ಅತಿಥಿಗಳು ಬಂದಾಗ, ಇಲ್ಲವೇ ನೆಂಟರು, ಬಂಧು-ಮಿತ್ರರು ಆಗಮಿಸಿದಾಗ ಕೋಳಿಯನ್ನು ಕೊಯ್ದು ಔತಣ ಮಾಡುವುದು ಸರ್ವೇ ಸಾಮಾನ್ಯ. ಈ ರೀತಿ ಮನುಷ್ಯನ ಬಾಯಿ ಚಪಲಕ್ಕೆ ಬಲಿಯಾಗಿರುವ ಕೋಳಿಯ ಕುರಿತು ಕೊಡಗಿನ ಹಳ್ಳಿಗಳಲ್ಲಿ ಅಜ್ಜ ಕಥೆಯೊಂದು ಪ್ರಚಲಿತದಲ್ಲಿದೆ.

ಅದು ರಾಮಾಯಣದ ಕಾಲ. ರಾಮನು ಹನುಮಂತನ ಸಹಾಯದೊಂದಿಗೆ ಲಂಕೆಗೆ ಸೇತುವೆ ಕಟ್ಟುವ ಕಾರ್ಯದಲ್ಲಿ ಮಗ್ನನಾಗಿದ್ದ. ಸರ್ವ ಪ್ರಾಣಿ ಪಕ್ಷಿಗಳೂ ಸೇತುವೆ ಕಟ್ಟುವ ಕೆಲಸಕ್ಕೆ ತಮ್ಮ ಕೈಲಾದ ಸಹಾಯ ಮಾಡುತ್ತಿದ್ದವು. ರಾಮನು ಸೇತುವೆ ಕಟ್ಟಲು ಪ್ರಾಣಿ ಪಕ್ಷಿಗಳ ಸಹಕಾರ ಕೇಳಿದಾಗ ಅವುಗಳು ಭಕ್ತಿ ಮತ್ತು ಸಂತೋಷದಿಂದ ಈ ಕಾರ್ಯಕ್ಕೆ ನೆರವಾಗುತ್ತಿದ್ದವು. ಎಲ್ಲರ ಸಹಕಾರದಿಂದ ಸೇತುವೆ ಕಟ್ಟುವ ಕೆಲಸ ಭರದಿಂದ ಸಾಗಿತ್ತು.

ಸಣ್ಣ ಪ್ರಾಣಿಯಾದ ಅಳಿಲು ಕೂಡಾ ತನ್ನ ದೇಹವನ್ನು ನೀರಿನಲ್ಲಿ ಒದ್ದೆಮಾಡಿ ಅನಂತರ ಮರಳಿನಲ್ಲಿ ಉರುಳಾಡಿ ದೇಹಕ್ಕಂಟಿದ ಮರಳನ್ನು ಸೇತುವೆ ಕಟ್ಟುವವರಿಗೆ ನೀಡಿ ಸೇತುವೆ ನಿರ್ಮಾಣ ಮಾಡಲು ಸಹಕರಿಸಿತು. ಇದರಿಂದ ಸಂತೃಪ್ತನಾದ ರಾಮ ಪ್ರೀತಿಯಿಂದ ಅಳಿಲಿನ ಬೆನ್ನನ್ನು ಸವರಿದಾಗ ಸುಂದರವಾದ ಮೂರು ರೇಖೆಗಳು ಬೆನ್ನಲ್ಲಿ ಮೂಡಿದವು.

ಎಲ್ಲಾ ಪ್ರಾಣಿ ಪಕ್ಷಿಗಳು ಸೇತುವೆ ನಿರ್ಮಾಣಕ್ಕೆ ಸಹಾಯ ನೀಡುತ್ತಿರುವಾಗ ಕೋಳಿ ಮಾತ್ರ ದೂರದಲ್ಲಿ ನಿಂತು ನಿರ್ಮಾಣ ಕಾರ್ಯವನ್ನು ನೋಡುತ್ತಿತ್ತು. ಯಾರು ಎಷ್ಟೇ ಕೇಳಿಕೊಂಡರೂ ಅದು ಸಹಾಯ ಮಾಡಲು ಒಪ್ಪಲಿಲ್ಲ. ಕೊನೆಗೆ ರಾಮನೇ ಸಹಾಯ ಕೇಳಲು ಬರಬೇಕಾಯಿತು. ರಾಮನು ಸಹಾಯ ನೀಡುವಂತೆ ಕೋಳಿಯನ್ನು ವಿನಂತಿಸಿಕೊಂಡಾಗ, ಕೋಳಿ ಗರ್ವದಿಂದ "ನೀನೂ ರಾಜ, ನಾನೂ ರಾಜ. ನಿನಗೆ ಕಿರೀಟವಿರುವಂತೆ ನನಗೂ ಕಿರೀಟವಿದೆ" ಎನ್ನುತ್ತಾ ತನ್ನ ತಲೆಯ ಮೇಲಿರುವ ಕೆಂಪನೆಯ ಕಿರೀಟದಂತಿರುವ ಭಾಗವನ್ನು ಪ್ರದರ್ಶಿಸಿತು. ಕೋಳಿಯ ಅಹಂಕಾರದಿಂದ ಕುಪಿತನಾದ ರಾಮ "ಎಲೈ ಕೋಳಿಯೇ, ಅಹಂಕಾರದಿಂದ ಮೆರೆಯುತ್ತಿರುವ ನಿನಗೆ ಸರಿಯಾದ ನೆಲೆಯಿಲ್ಲದೆ ಹೋಗಲಿ. ಇತರರು ಇಷ್ಟಪಟ್ಟ ತಕ್ಷಣ ನಿನ್ನ ಪ್ರಾಣ ಹೋಗ್ಲಿ" ಎಂದು ಶಾಪ ಕೊಟ್ಟನು.

ರಾಮನ ಶಾಪದ ಪ್ರಭಾವದಿಂದ ಕೋಳಿ ತನಗಿದ್ದ ಪ್ರದೇಶ, ನೆಲೆಗಳನ್ನೆಲ್ಲಾ ಕಳೆದುಕೊಂಡು ನಿರ್ಗತಿಕನಾಗಿ ಮನುಷ್ಯರ ಅಧೀನವಾಯಿತು. ಮಾತ್ರವಲ್ಲ ಮನುಷ್ಯ ಇಷ್ಟಪಟ್ಟ ದಿನ ಅವನ ಆಹಾರವಾಗಿ ಪ್ರಾಣವನ್ನು ಕಳೆದುಕೊಳ್ಳುವ ದುರ್ಗತಿ ಪಡೆಯಿತು. ●

○ ಬೈತಡ್ಕ ಕೆ. ಶ್ರೀಧರ್,
ಕೊಡಗು.

---

## –ನಗೆಹನಿ–

❀ ದೊಡ್ಡಾಸ್ಪತ್ರೆ ಮುಂದೆ 'ಒನ್ ವೇ' ಅಂತ ಬೋರ್ಡ್ ಹಾಕಿದ್ದಾರೆ, ಇರಬಹುದು. ಆದರೆ ಅವರೇ ಹೀಗೆ ಹಾಕಿಕೊಳ್ಳಬಹುದೆ ?

ಡಾ|| ಶಿವರಾಂ [ಕೊರವಂಜಿ]

---

## ಶಾಂತಿ ಪ್ರಿಯರು

ಸದ್ದು ಗದ್ದಲಗಳ ನಡುವೆಯೂ
ಇಂಪಾದ ಕೋಗಿಲೆಯ ದನಿ
ಕಟುಕರ ಸಾಮ್ರಾಜ್ಯದಲ್ಲಿ
ಕರುಣಾಮಯಿ ಇರುವ ಹಾಗೆ

ಸುಡುವ ಸೂರ್ಯನ ನಡುವೆಯೂ
ತಂಪಾದ ಚಂದಿರನ ಬೆಳದಿಂಗಳು
ಕೆಸರಿನ ಕಲ್ಮಶ ಕೆರೆಯಲಿ
ಅರಳುವ ನೈದಿಲೆಯಂತೆ

ಕಂದನ ಕತ್ತು ಹಿಸುಕಿ ಸಾಯಿಸುವ
ರುದ್ರಿಯರ ನಡುವೆಯೂ
ಮಮಕಾರದಿಂದ ತೊಟ್ಟಿಲು ತೂಗುವ
ಮಮತೆಯ ಮಾತೆಯರಿರುವ ಹಾಗೆ

ಹಿಂಸೆ ನೋವನ್ನಿತ್ತು ನಗುವ
ರಾಕ್ಷಸರ ನಡುವೆಯೂ
ಕಣ್ಣೀರೊರೆಸಿ ಸಹಾಯ ಹಸ್ತ
ನೀಡುವ ಪರೋಪಕಾರಿ ಇರುವಂತೆ

ಭೋರ್ಗರೆದು ಪ್ರಳಯವೆಬ್ಬಿಸಿ
ಸಾವು ನೋವು ತರುವ ಕಡಲುಗಳ
ನಡುವೆಯೂ
ಪ್ರಶಾಂತವಾಗಿ ಹರಿದು
ಜೀವ ಸಲಹುವ ನದಿಗಳಿರುವ ಹಾಗೆ

ಅಣುಬಾಂಬು ಸ್ಫೋಟಿಸಿ ಹಸಿಮಾಂಸ
ಬಿಸಿನೆತ್ತರಿನೊಡನೆ
ಆಟವಾಡುವ ಯುದ್ಧ ಪ್ರಿಯರ
ನಡುವೆಯೂ
ಜಗವೊಂದೇ ಕುಲವೊಂದೇ ದೇವ
ನೊಬ್ಬನೇ
ಎಂದು ಸಾರುವ ಶಾಂತಿಪ್ರಿಯರಿರುವರಂತೆ

○ ಪ್ರಸಾದಿನಿ, ಮಡಪ್ಪಾಡಿ,
ಕೆ. ಆರ್. ನಗರ.

# ಗೌಡಕೇಸರಿ ನಿಡ್ಯಮಲೆ ಮುದ್ದಪ್ಪನವರ ಜೀವನ ಚರಿತ್ರೆ ಭಾಗ-೪

[ಹಿಂದಿನ ಸಂಚಿಕೆಗೆಯಿಂದ]

ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕಿನ ಐವರ್ನಾಡಿನ ಮಡ್ತಿಲ ಮನೆತನಕ್ಕೆ ಸೇರಿದ ಆಗರ್ಭ ಶ್ರೀಮಂತ ದಿ॥ ಮಡ್ತಿಲ ಬೆಳ್ಯಪ್ಪಗೌಡರು ತಮ್ಮ ಏಕಮಾತ್ರ ಪುತ್ರಿಗೆ ವರಾನ್ವೇಷಣೆಯಲ್ಲಿ ತೊಡಗಿದ್ದರು. ಅವರಿಗೆ ದೊರೆತ ಮಾಹಿತಿ ಮತ್ತು ಅನುಭವದಿಂದ ನಿಡ್ಯಮಲೆ ಮುದ್ದಪ್ಪನವರಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿ ಅವರನ್ನು ಮುಂದಕ್ಕೆ ಓದಿಸುವುದು ಎಂದು ತೀರ್ಮಾನಿಸಿದರು.ಅದರಂತೆಮುದ್ದಪ್ಪನವರಿಗೆ ತನ್ನ ಮಗಳನ್ನು ಕೊಟ್ಟು ಮಂಗಳೂರಿನ ಅಲೋಸಿಯಸ್ ಕಾಲೇಜಿಗೆ ಬಿ.ಎ. ಪದವಿಗೆ ಸೇರಿಸಿದರು. ಅಲ್ಲಿಂದ ಮುಂದೆ ಮದ್ರಾಸಿಗೆ ಕಳುಹಿಸಿ ಕಾನೂನು ಪದವಿಯನ್ನು ಸಹ ಕೊಡಿಸಿದರು. ಇದೇ ಸಂದರ್ಭದಲ್ಲಿ ಮುದ್ದಪ್ಪನವರ ತಮ್ಮ ಸೋಮಣ್ಣನವರಿಗೂ ಸಹ ಅಣ್ಣನಷ್ಟೇ ಬುದ್ಧಿವಂತನಾಗಿ ಅಣ್ಣನ ಜೊತೆಯಲ್ಲಿಯೇ ತಮ್ಮ ಬಿ.ಎ. ಪದವಿ ಮತ್ತು ಕಾನೂನು ಪದವಿ ಮುಗಿಸಿದರು. ನಂತರ ಮುದ್ದಪ್ಪನವರು ಮಡಿಕೇರಿಗೆ ಬಂದು ಈಗ ಚರ್ಚ್ ಸೈಡ್ ಹೋಟೆಲ್ ಹತ್ತಿರದ ಮನೆಯಲ್ಲಿ ವಾಸ ಮಾಡಲು ಪ್ರಾರಂಭಿಸಿ, 1924ರಲ್ಲಿ ವಕೀಲ ವೃತ್ತಿಯನ್ನು ಮಡಿಕೇರಿಯ ನ್ಯಾಯಾಲಯದಲ್ಲಿ ಕೈಗೊಂಡರು. ತಮ್ಮ ಸೋಮಣ್ಣನವರು ಕೂಡ ವಕೀಲ ವೃತ್ತಿಯನ್ನು ಆರಂಭಿಸಿದರು. ಇವರಿಬ್ಬರೂ ತಮ್ಮ ವೃತ್ತಿಯಲ್ಲಿ ಅಪಾರವಾದ ಹೆಸರನ್ನು ಜನಮನ್ನಣೆಯನ್ನು ಗಳಿಸಿದರು. ಇದೇ ಸಂದರ್ಭದಲ್ಲಿ 1933ನೇ ಇಸವಿಯಲ್ಲಿ ಶ್ರೀಮಾನ್ ಮುದ್ದಪ್ಪನವರ ಬುದ್ಧಿವಂತಿಕೆಯನ್ನು ಮೆಚ್ಚಿ ಬ್ರಿಟೀಷ್ ಸರ್ಕಾರ ಇವರನ್ನು ವಿರಾಜಪೇಟೆ ನ್ಯಾಯಾಲಯಕ್ಕೆ ಮುನ್ಸಿಫ್ ಆಗಿ ನೇಮಿಸಿದರು. ಇವರು ಅಲ್ಲಿಯೂ ಕೂಡ ತಮ್ಮ ವೃತ್ತಿಯಲ್ಲಿ ಪಾರದರ್ಶಕತೆಯನ್ನು ತೋರಿಸಿದ್ದರಿಂದ ಸರ್ಕಾರವು ಇವ್ರ ಸೇವೆಯನ್ನು ಮೆಚ್ಚಿ 1940ರಲ್ಲಿ ಕೊಡಗಿನ ಮೊತ್ತಮೊದಲ ಡಿಸ್ಟ್ರಿಕ್ ಮತ್ತು ಸೆಷನ್ಸ್ ಜಡ್ಜ್‌ರಾಗಿ ಇವರು ಈ ಹುದ್ದೆಯಲ್ಲಿ ತಮ್ಮ ಕೊನೆಯವರೆಗೆ ಅಂದರೆ, 1953 ಏಪ್ರಿಲ್ 4ನೇ ದಿನಾಂಕದವರೆಗೆ ಸೇವೆ ಸಲ್ಲಿಸಿದರು. ಅವರನ್ನು ವಿಧಿ ಅಲ್ಲಿಗೆ ನಿಲ್ಲಿಸದಿದ್ದರೆ ಮುಂದೆ ಕರ್ನಾಟಕ ಉಚ್ಛ ನ್ಯಾಯಾಲಯದಲ್ಲಿ ನ್ಯಾಯಮೂರ್ತಿಯಾಗಿ ನೇಮಕಗೊಳ್ಳುವ ಸಾಧ್ಯತೆ ತುಂಬಾ ಇತ್ತು. ಆದರೆ ವಿಧಿವಶವಾದರು. ಅವರನ್ನು ಮತ್ತು ಅವರು ಮಾಡಿದ ಸಮಾಜ ಸೇವೆಯನ್ನು ಇಂದಿಗೂ ಜನರು ಕೊಂಡಾಡುವುದನ್ನು ನೋಡಿದರೆ ಅವರ ಶ್ರೇಷ್ಠತೆಯ ಅರಿವಾಗುತ್ತದೆ.

ಇನ್ನು ಅವರ ಜೀವಿತ ಕಾಲದಲ್ಲಿ ನಡೆದ ಕೆಲವು ಘಟನೆಗಳನ್ನು ಮತ್ತು ಅವರ ಸಮಾಜ ಸೇವೆಯನ್ನು ನೆನಪಿಸಿಕೊಳ್ಳದಿದ್ದರೆ ಈ ಬರಹ ಅಪೂರ್ಣವಾಗುತ್ತದೆ. ದಿ॥ ನಿಡ್ಯಮಲೆ ಮುದ್ದಪ್ಪನವರು ತಮ್ಮ ಜೀವನದಲ್ಲಿ ಹಲವಾರು ವ್ಯಕ್ತಿಗಳಿಗೆ ಸಂಘ ಸಂಸ್ಥೆಗಳಿಗೆ ಅನೇಕ ಉಪಕಾರಗಳನ್ನು ಮಾಡಿರುತ್ತಾರೆ. ಅದರಲ್ಲಿ ಎಲ್ಲವನ್ನೂ ಇಲ್ಲಿ ಬರೆಯುತ್ತಿದ್ದೇನೆ.

ಈಗ ಕರ್ನಾಟಕ ಸರ್ಕಾರದಲ್ಲಿ ಹಿರಿಯ ಶ್ರೇಣಿಯ ಐ.ಎ.ಎಸ್. ಅಧಿಕಾರಿಯಾಗಿರುವ ಬಿ ಎ. ಹರೀಶ್‌ಗೌಡರವರ ತಂದೆ ದಿ॥ ಐತಪ್ಪಗೌಡರವರು ಆಗ ಪುತ್ತೂರಿನ ಬೋರ್ಡ್ ಹೈಸ್ಕೂಲಿನಲ್ಲಿ ಎಸ್.ಎಸ್.ಎಲ್.ಸಿ. ಯಲ್ಲಿ ಮೊದಲನೇ ಶ್ರೇಣಿಯಲ್ಲಿ ಉತ್ತೀರ್ಣರಾದಾಗ ದಿ॥ ಮುದ್ದಪ್ಪನವರಿಗೆ ಹೇಗೋ ವಿಷಯ ಗೊತ್ತಾಗಿ ಅವರ ಮುಂದಿನ ವಿದ್ಯಾಭ್ಯಾಸದ ಸಂಪೂರ್ಣ ಜವಾಬ್ದಾರಿಯನ್ನು ತೆಗೆದುಕೊಂಡು ಅವರನ್ನು ಉನ್ನತ ವ್ಯಕ್ತಿಯಾಗಿ ರೂಪಿಸುವಲ್ಲಿ ಫಲಕಾರಿಯಾಗಿದ್ದರು.

ಸೋಮವಾರಪೇಟೆ ತಾಲ್ಲೂಕಿನ ಹೆಬ್ಬಾಲೆ ಎಂಬ ಊರಿನ ಕಾಳಪ್ಪ ಎಂಬ ಹರಿಜನ ಯುವಕನನ್ನು ಮುದ್ದಪ್ಪನವರು ಅವರ ಮನೆಯಲ್ಲಿಯೇ ಇರಿಸಿಕೊಂಡು ಅವನ ವಿದ್ಯಾಭ್ಯಾಸವನ್ನು ನೋಡಿಕೊಂಡರು. ಆ ಯುವಕ ಮುಂದೆ ಅಧ್ಯಾಪಕನಾಗಿ ನೇಮಕಗೊಂಡನು.

ನೀಡ್ಯಮಲೆ ಜ್ಞಾನೇಶ್, ಸುಳ್ಯ

ತೊಟಂಬೈಲು ಚಂಗಪ್ಪನವರನ್ನು ಓದಿಸಿ, ಅವರನ್ನು ವಕೀಲನನ್ನಾಗಿ ಮಾಡಿ ತಮ್ಮ ಹಿರಿಮಗಳನ್ನು ಕೊಟ್ಟು ಮದುವೆ ಮಾಡಿದರು. ಇವರು ಗೌಡ ಸಮಾಜದ ವತಿಯಿಂದ ನಡೆಸುತ್ತಿದ್ದ ವಿದ್ಯಾರ್ಥಿನಿಲಯಕ್ಕೆ ಆಗಾಗ ಭೇಟಿ ಕೊಟ್ಟು ವಿದ್ಯಾರ್ಥಿಗಳಿಗೆ ಮಾರ್ಗದರ್ಶನಗಳನ್ನು ನೀಡಿ ಉತ್ತಮ ಪ್ರಜೆಗಳನ್ನಾಗಿ ರೂಪಿಸಲು ಶ್ರಮಿಸಿದರು. ಪ್ರತಿಭಾವಂತ ಬಡ ವಿದ್ಯಾರ್ಥಿಗಳಿಗೆ ಧನ ಸಹಾಯವನ್ನು ಮಾಡಿ ಪೋಷಿಸುತ್ತಿದ್ದರು. ಅವರು ಕೊಡಗಿನ ಸರ್ಕಾರಿ ಉದ್ಯೋಗದ ಸೆಲೆಕ್ಷನ್ ಕಮಿಟಿಯ ಅಧ್ಯಕ್ಷರಾಗಿದ್ದಾಗ ಹಲವಾರು ಪ್ರತಿಭಾವಂತರಿಗೆ, ಅದರಲ್ಲೂ ಗೌಡ ಸಮುದಾಯದವರಿಗೆ ಉದ್ಯೋಗವನ್ನು ಕೊಡಿಸಿದ್ದಾರೆ.

ಇನ್ನು ಅವರ ವ್ಯಕ್ತಿತ್ವವನ್ನು ಪ್ರತಿಬಿಂಬಿಸಲು ಕೆಲವು ಘಟನೆಗಳನ್ನು ಇಲ್ಲಿ ನಾನು ಹೇಳಲಿಚ್ಛಿಸುತ್ತೇನೆ.

[ಮುಂದುವರೆಯುವುದು]

— ಹರಟೆ —

## ಎರಡು ಕಾರಣಗಳು ???

ಹುಡುಗ : ಕೈಯಲ್ಲಿರುವ ವಾಚು ನೋಡುತ್ತಾ ತರಾತುರಿಯಲ್ಲಿ ಹೋಗುತ್ತಿರುವ ಹುಡುಗಿಯನ್ನು ಗುಡ್ ಮಾರ್ನಿಂಗ್ ಮೇಡಂ, ಸಮಯ ಎಷ್ಟಾಯಿತ್ತು?

ಹುಡುಗಿ : ರೀ ಮಿಸ್ಟರ್ ನಾನು ತುರ್ತಾಗಿ ಹೋಗುತ್ತಿದ್ದೇನೆ ಎಂದು ಮುಖ ಸಿಂಡರಿಸುವಳು.

ಕುದುಪಜೆ ಬಸಪ್ಪ, ಕುಶಾಲನಗರ.

ಹುಡುಗ : ರೀ ಮೇಡಂ, ನೀವು ಇಷ್ಟಕ್ಕೆಲ್ಲಾ ಕೋಪಿಸಿಕೊಳ್ಳಬಾರದು, ಇದಕ್ಕೆಲ್ಲ ಮುಖ್ಯವಾಗಿ 2 ಕಾರಣಗಳಿವೆ.

ಹುಡುಗಿ : ರೀ ನಿಮ್ಮ ತಲೆಹರಟೆ ಬೇಕಾಗಿಲ್ಲಾರೀ, ನನಗೆ ನಿಮ್ಮಂತೆ ವಿಪರೀತ ಬುದ್ಧಿಯವರನ್ನು ಕಂಡರಾಗುವುದಿಲ್ಲ.

ಹುಡುಗ : ಇದಕ್ಕೂ 2 ಕಾರಣಗಳಿವೆ. ಒಂದೋ ನನಗೆ ಸಮಯ ಹೇಳಲು ನಿಮಗೆ ಮನಸ್ಸಿಲ್ಲದಿರಬಹುದು ಅಥ್ವ ನಿಮ್ಗೆ ಗಂಡಸರನ್ನು ಕಂಡರೆ ತುಂಬಾ ದ್ವೇಷವಿರಬಹುದು.

ಹುಡುಗಿ : ರೀ ನನ್ನ ಅಂತರಾಳವನ್ನು ಅಳಿಯಲು ನೀವ್ಯಾರು ? ನೀವೇನು ನನ್ನ ಸಂಬಂಧಿಕರೇ.

ಹುಡುಗ : ಮೇಡಂ, ಇದಕ್ಕೂ ಮುಖ್ಯವಾಗಿ 2 ಕಾರಣಗಳಿವೆ. ಒಂದೋ ನಿಮಗೆ ಅಣ್ಣ ತಮ್ಮಂದಿರಿಲ್ಲದಿರಬಹುದು ಅಥವಾ ನೀವು ಮಾನಸಿಕ ರೋಗಿಯಾಗಿರಬಹುದು.

ಹುಡುಗಿ : ನನ್ನನ್ನು ಮಾನಸಿಕ ರೋಗಿಯೋ ಅಥವಾ ಹುಚ್ಚಿಯೋ ಎಂದು ಸಮರ್ಥಿಸಲು ನೀವೇನು ಮಹಾ ಮೇಧಾವಿ ವೈದ್ಯರೇನು ? ಸರಿಯಾದ ಸಮಯ ತಿಳಿದು ಬರಲಾಗುವುದಿಲ್ಲ. ಅಧಿಕ ಪ್ರಸಂಗಿ, ಅವಿವೇಕಿ ?

ಹುಡುಗ : ನೋಡಿ ಮೇಡಂ, ಈ ರೀತಿ ನಿಮ್ಮನ್ನು ನೀವೇ ಅರ್ಥಮಾಡಿಕೊಳ್ಳದೆ, ಇನ್ನೊಬ್ಬರನ್ನು ಪರಿಚಯ ಮಾಡಿಕೊಳ್ಳದೆ, ಅವಿವೇಕಿ ಎಂದು ಬಯ್ಯಲು ಮುಖ್ಯವಾಗಿ 2 ಕಾರಣಗಳಿವೆ. ಒಂದೋ ನಿಮಗೆ ಪಾಠ ಕಲಿಸಿದ ಗುರುಗಳು ಸರಿಯಾಗಿ ಸಭ್ಯ ವರ್ತನೆಗಳನ್ನು ಕಲಿಸಲಿಲ್ಲ ಅಥವಾ ನಿಮ್ಮ ತಂದೆ ತಾಯಂದಿರು ನಿಮಗೆ ಸರಿಯಾದ ಬುದ್ಧಿ ಕಲಿಸಲಿಲ್ಲ.

ಹುಡುಗಿ : ರೀ ಮಿಸ್ಟರ್, ನನ್ನ ತಂದೆ ತಾಯಿಯರ ಕುಲ ಗೋತ್ರಗಳನ್ನು ಬಯ್ಯುವಷ್ಟು ದುರಾಹಂಕಾರವನ್ನು ನೀವು ವ್ಯಕ್ತಪಡಿಸುತ್ತಿದ್ದೀರಿ. ನಾಲಿಗೆ ಬಿಗಿಹಿಡಿದು ಮಾತನಾಡಿ.

ಹುಡುಗ : ನೋಡಿ ಮೇಡಂ, ನಿಮ್ಮ ಕುಲಗೋತ್ರದ ವಿಚಾರದಲ್ಲಿ ನಿಮಗೆ ಕೋಪ ಬರಲು ಮತ್ತು ನನ್ನನ್ನು ಹೆದರಿಸಲು ಮುಖ್ಯವಾಗಿ 2 ಕಾರಣಗಳಿವೆ. ಒಂದು ನಿಮಗೆ ನನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡಲಾಗದೇ ಇರಬಹುದು ಅಥ್ವ ನಾನೇ ಚೆಲುವೆ ಎಂಬ ಜಂಭದವರಾಗಿರಬಹುದು.

ಹುಡುಗಿ : ರೀ, ನನ್ನ ವೈಯಕ್ತಿಕ ವಿಚಾರದಲ್ಲಿ ಪ್ರಶ್ನೆ ಮಾಡಲು ನಿಮಗೆಷ್ಟು ದರ್ಪವಿರಬಹುದು. ನಿಮಗೆ ತಕ್ಕ ಪಾಠ ಕಲಿಸುತ್ತೇನೆ ನೋಡಿ ?

ಹುಡುಗ : ನೋಡಿ, ಇದಕ್ಕೂ ಮುಖ್ಯವಾಗಿ 2 ಕಾರಣಗಳಿವೆ. ಒಂದೋ ನಿಮ್ಮ ವೈಯಕ್ತಿಕ ವಿಚಾರವನ್ನು ನೀವು ಯಾರ ಬಳಿಯಲ್ಲಿಯೂ ಹೇಳದೆ ಕೊರಗುವಂತವರಿರಬಹುದು, ಎರಡನೆಯದಾಗಿ ಅನಾವಶ್ಯಕ ವಿಚಾರಗಳಿಗೆ ಇತರರಿಗೆ ಪಾಠ ಕಲಿಸುವಂತ ರೌಡಿಗಳ ಸಂಘ ನಿಮ್ಮಲ್ಲಿರಬಹುದು.

ಹುಡುಗಿ : ಏನ್ರಿ, ನೀವು ನನ್ನ ಮೇಲೆ ಇಲ್ಲ ಸಲ್ಲದ ಅಪಪ್ರಚಾರದ ಕಥೆ ಕಟ್ಟುತ್ತಿದ್ದೀರಿ. ನನಗೆ ಕೋಪಬರಿಸಬೇಡಿ, ಬೇಗ ಜಾಗ ಖಾಲಿಮಾಡಿ ?

ಹುಡುಗ : ಇದಕ್ಕೂ ಮುಖ್ಯವಾಗಿ 2 ಕಾರಣಗಳಿವೆ ಒಂದೋ ನೀವು ತುಂಬಾ ಕೋಪಿಷ್ಠರಿರಬೇಕು. ಅಥವಾ ನನ್ನಂತ ಸಂಘಜೀವಿಯೊಡನೆ ಸಭ್ಯ ರೀತಿ ವರ್ತಿಸದೆ ಒಂಟಿ ಜೀವನ ನಡೆಸುವಂತ ಗಂಡುಬೀರಿ ಇರಬಹುದು.

ಹುಡುಗಿ : ರೀ ನನ್ನ ಅಂತರಂಗವನ್ನು ತಿಳಿದು ನಿಮಗೇನಾಗಬೇಕಾಗಿದೆ? ನಮ್ಮಪ್ಪ ನಿಮ್ಮೊಂದಿಗೆ ಮದುವೆ ಮಾಡಿಸುತ್ತೇನೆಂದು ಭಾಷೆ ಕೊಟ್ಟಿದ್ದಾರೆಯೇ ?

ಇದಕ್ಕೂ ಮುಖ್ಯವಾಗಿ 2 ಕಾರಣಗಳಿವೆ. ಒಂದೋ ನಿಮ್ಮನ್ನು ಹಲವಾರು ಗಂಡುಗಳು ನೋಡಿ ಮದುವೆಯಾಗದೆ ಮೋಸಗೊಳಿಸಿರಬೇಕು. ಮತ್ತು ನೀವು ಅಂತಹ ಗಂಡಸರೆಂದು ನನ್ನನ್ನು ತಿಳಿದು ನನಗೆ ಛೀಮಾರಿ ಹಾಕುತ್ತಿದ್ದೀರಿ.

ಹುಡುಗಿ : ರೀ, ಈ ರೀತಿಯ ಹಾಸ್ಯ ಬುದ್ಧಿಯನ್ನು ಏನಿದ್ದರೂ ರಾಜಕೀಯ ಜೀವನದಲ್ಲಿಟ್ಟುಕೊಳ್ಳಿ. ನನ್ನನ್ನು ಕೆಣಕಿ ನಿಮಗೇನು ಸಾಧನೆಯಾಗುತ್ತದೆ ?

ಹುಡುಗ : ನೋಡಿ, ನಿಮ್ಮ ಈ ಉತ್ತರಕ್ಕೂ 2 ಕಾರಣಗಳಿವೆ. ಕೊನೆಗೂ ನೀವು ನನ್ನ ವೃತ್ತಿ ಮತ್ತು ರಾಜಕೀಯದ ಬಗ್ಗೆ ಬಂದಿದ್ದೀರಿ. 2ನೆಯದಾಗಿ ನಿಮ್ಮನ್ನು ಸರಿದಾರಿಗೆ ಎಳೆಯಲು ನಾನು ಸಾಮರ್ಥ್ಯನಾಗಿದ್ದೇನೆ ಇನ್ನಾದರೂ ಸಹ ಬಾಳ್ವೆಯನ್ನು ಕಲಿತುಕೊಳ್ಳಿ.

ಹುಡುಗಿ : ನೋಡಿ, ನಾನು ಹೋಗುತ್ತೇನೆ. ನಿಮಗೆ ಸಮಯ ಹೇಳಲು ನನ್ನಲ್ಲಿ ವಾಚ್ ಇಲ್ಲ ನಿಮ್ಮ ಕೈಯಲ್ಲಿ ವಾಚ್ ಇದೆಯಲ್ಲಾ ?

ಹುಡುಗ : ನೋಡಿ ಮೇಡಂ, ಈ ಎಲ್ಲಾ ರಾದ್ಧಾಂತಗಳಿಗೂ ಮುಖ್ಯವಾಗಿ 2 ಕಾರಣಗಳಿವೆ. ಒಂದು ಮುಖ್ಯವಾಗಿ ನನ್ನ ವಾಚ್ ನಿಂತುಹೋಗಿದೆ. 2ನೇದಾಗಿ ನನಗೆ ತುಂಬಾ ದಿನದಿಂದ ನಿಮ್ಮಲ್ಲಿ ತುಂಬಾ ಹೊತ್ತು ಮಾತನಾಡಬೇಕೆಂಬ ಇಷ್ಟವಿದ್ದುದರಿಂದ. ಹೋಗಿ ಬನ್ನಿ, ನಮಸ್ಕಾರ ಮೇಡಂ.

# ನಿಮ್ಮ ಪತ್ರಗಳು

## ಗೌಡ ಸಮಾಜ

ಗೌಡ ಆದಮೇಲೆ ಸಮಾಜ ನಿರ್ಮಾಣವಾಗಿರಬಹುದಲ್ಲವೆ ? ಆದುದರಿಂದ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಸಮಾಜ/ಜನಾಂಗಕ್ಕೆ ನಾನು ಏನು ಒಳ್ಳೆಯ ಕೆಲಸ ಮಾಡಬೇಕು ಎಂಬುದನ್ನು ಹೃದಯಾಂತರಾಳದಿಂದ ಮನಗಾಣಬೇಕಾದುದು ಹಾಗೂ ಆತ್ಮಾವಲೋಕನ ಮಾಡಬೇಕಾದ ವಿಷಯ. ಅಂತೆಯೇ ನಮ್ಮ ಸಮಾಜದ ಅಭಿವೃದ್ಧಿ ಮತ್ತು ಸಮಾಜದಲ್ಲಿ ನಮ್ಮ ಹೊಣೆ ಏನು ? ಸಮಾಜದ ಪ್ರಗತಿಪಥ ಎತ್ತ ಸಾಗುತ್ತಿದೆ ಎಂಬ ವಿಚಾರವನ್ನು ತಿಳಿಸುವುದಕ್ಕೋಸ್ಕರವೇ ನಮ್ಮದೇ ಆದ ಪತ್ರಿಕೆಯಲ್ಲಿ ನನ್ನ ಅನಿಸಿಕೆಯನ್ನು ವ್ಯಕ್ತಪಡಿಸುತ್ತಿದ್ದೇನೆಯೇ ಹೊರತು 'ಸಮಾಜದ' ಮೇಲೆ ಕೆಟ್ಟ ಅರೋಪಗಳನ್ನು ಮಾಡಿ ಚ್ಯುತಿಗೆ ಕಾರಣವಾಗುವುದಕ್ಕಲ್ಲವೆಂಬ ಅರಿವಿರಲಿ.

ಸಂಚಿಕೆ 10ರಲ್ಲಿ ಪ್ರಕಟಗೊಂಡ ಹೇಳಿಕೆಗೆ, ಕೊಡಗು ಗೌಡ ಸಮಾಜದ ಅಧ್ಯಕ್ಷರ ಸ್ಪಷ್ಟನೆಯು ಉದಾರತೆಯಿಂದ ಮುಕ್ತವಾಗಿದೆ. ಇದು ಸ್ವಾಗತಾರ್ಹ ಕ್ರಮವಾಗಿದೆ.

## ಅಲ್ಪಜ್ಞಾನಿಯ ಅಭಿಪ್ರಾಯ

"ಪತ್ರಿಕೆ", ಸರಕಾರ–ಸಾರ್ವಜನಿಕರು, ಸಂಘ-ಸಂಸ್ಥೆ ಸದಸ್ಯರು ಇವರ ಮಧ್ಯೆ ಅಭಿಪ್ರಾಯ ಹಂಚಿಕೆಯ ಮಾಧ್ಯಮ ಮಾತ್ರವಲ್ಲ, ಯಾವುದೇ ಒಂದು ಪ್ರಗತಿಪರ ಪಥದ ಬೆಳಕು [ಮುಂಚುಣಿ] ಆಗಿರುತ್ತದೆ ಎಂಬುವುದೂ ನನ್ನ ನಂಬಿಕೆಯಾಗಿದೆ.

ಕೊಡಗು ಗೌಡ ಜನಾಂಗದಲ್ಲಿ "ದಿವ್ಯ ಜ್ಞಾನಿಗಳಿಗಿಂತ" "ಅಲ್ಪಜ್ಞಾನಿ"ಗಳ ಸರಾಸರಿ ಶೇಕಡವಾರು ಹೆಚ್ಚಿದ್ದಾರೆ ಎಂಬುವುದು ನಿಮಗೆ ತಿಳಿದಿದೆ ಅಂದಮೇಲೆ ಅಲ್ಪಜ್ಞಾನಿಗಳನ್ನು ದಿವ್ಯ ಜ್ಞಾನಿಗಳನ್ನಾಗಿ ಪರಿವರ್ತಿಸಲು "ಕೊಡಗು ಗೌಡ ವಿದ್ಯಾ ಸಂಘ"ದ ಕಾರ್ಯವೈಖರಿ ಮಹತ್ವವಾಗಿರಬೇಕು. ಅಲ್ಲದೆ ನಿಮ್ಮಂತಹ ದಿವ್ಯಜ್ಞಾನಿಗಳ ಪರಿಶ್ರಮ ಮುಖ್ಯವಾದುದು. ಮತ್ತು ಸ್ವಾಗತಾರ್ಹವೆ.

ನೀವು ಕೊಡಗು ವಿದ್ಯಾಸಂಘದ ನಿರ್ದೇಶಕರು ಎಂದು "ಕೊಡಗು ಸಂಗಾತಿ"ಯ ಮೂಲಕ ನಾನು ತಿಳಿದಿದ್ದೇನೆ. ಆದರೆ ವಿದ್ಯಾ ಸಂಘದ ಪದಾಧಿಕಾರಿಗಳು ಯಾರ್ಯಾರಿದ್ದಾರೆ ಎಂಬುವುದು ನನಗೆ ಮಾತ್ರವಲ್ಲ ನಮ್ಮ ಜನಾಂಗದ ಬಹಳಷ್ಟು ಅಲ್ಪಜ್ಞಾನಿಗಳಿಗೆ ಗೊತ್ತಿಲ್ಲ ಎಂಬುದನ್ನು ನಾನು ತಿಳಿಸಬಯಸುತ್ತೇನೆ. ಕೊಡಗು ವಿದ್ಯಾಸಂಘದ ಸೂಕ್ತ ಮಾಹಿತಿ ನಮ್ಮದೇ ಜನಾಂಗಕ್ಕೆ ಎಲ್ಲಿ ಸಿಗುತ್ತದೆ ಎನ್ನುವುದನ್ನು ತಿಳಿಯುವುದೇ ಕಷ್ಟಕರವಾಗಿದೆ.

**ಸಾರ್ವಜನಿಕರಲ್ಲಿ ಗೊಂದಲ ಮೂಡಿಸುವ ಪ್ರವೃತ್ತಿಯಲ್ಲ!**

ವಿದ್ಯಾಸಂಘದ ಕಟ್ಟಡ, "ಕಲ್ಯಾಣ ಮಂಟಪ" ಎಂದಾದ ಮೇಲೆ, ಅಲ್ಲಿ ನೀರಿನ ಸೌಕರ್ಯ, ಕುಳಿತುಕೊಳ್ಳಲು ಕುರ್ಚಿ, ಬೆಂಚು, ಸ್ವಚ್ಛತೆಗೆ ಸುಣ್ಣ ಬಣ್ಣ, ಭದ್ರತೆಗೆ ಕಾಂಪೌಂಡು ಗೇಟು ಇವೆಲ್ಲ ವ್ಯವಸ್ಥೆ ಸಾಮಾನ್ಯವಾದದ್ದು.

ವಿದ್ಯಾಸಂಘದ ಹೆಸರಿನಲ್ಲಿ ಒಂದು ಕಟ್ಟಡವನ್ನು ವ್ಯವಸ್ಥೆ ಮಾಡಿ ಮದುವೆ ಸಮಾರಂಭಗಳಿಗೆ ಬಾಡಿಗೆಗೆ ಕೊಟ್ಟು ಅದರಲ್ಲಿ ಬಂದ ಹಣದಿಂದ ಮತ್ತೆ ಕಟ್ಟಡದ ಅಭಿವೃದ್ಧಿ ಮಾಡಿದಲ್ಲಿ ಸಮಸ್ತ ಗೌಡ ಜನಾಂಗದ ಕಲ್ಯಾಣ ಅಭಿವೃದ್ಧಿಯಾಗಿದೆ ಎಂದರೆ ಅಲ್ಲಿಗೆ ಇದು ದೊಡ್ಡ ಸಂಗತಿಯೇನಲ್ಲ. ಗೌಡ ಜನಾಂಗದ ಹೆಸರಿನಲ್ಲಿ ಅಥವಾ ಸಮಸ್ತ ಗೌಡ ಜನಾಂಗದ ವಿದ್ಯಾಭ್ಯಾಸಕ್ಕೆ ಕೊಡಗು ಗೌಡ ವಿದ್ಯಾಸಂಘ ಯಾವ ಮಟ್ಟದ ಕೆಲಸ ಮಾಡಿದೆ ಎಂದು ಕೇಳಬಹುದೇ...!

ಪ್ರತಿಭಾವಂತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ವ್ಯವಸ್ಥೆ ಮಾಡಿರುವುದು ಸ್ವಾಗತಾರ್ಹ. ಆದರೆ ಬಡತನ ರೇಖೆಗಿಂತ ಕೆಳಗಿರುವ ಹೆಚ್ಚಿನ ನಮ್ಮ ಗೌಡ ಕುಟುಂಬಗಳ ಮಕ್ಕಳಿಗೆ ಪ್ರಾಥಮಿಕ ವಿದ್ಯಾಭ್ಯಾಸವೇ ಕಷ್ಟವಾಗಿದೆ. ಇಂತಹ ಮಕ್ಕಳಿಗೆ ಸೂಕ್ತ ವಿದ್ಯಾಭ್ಯಾಸದ ಮಾರ್ಗದರ್ಶಿಯಾಗಬೇಕು. ಸಮಸ್ತ ಗೌಡ ಜನಾಂಗದ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹವಾಗುವಂತಹ ಏನಾದರೂ ಕಾರ್ಯಕ್ರಮ–ಸಲಹೆಗಳಂತಹ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆಯೇ ? ಹೀಗೆ ಮಾಡಿದರೆ ಮಾತ್ರ ಕೊಡಗು ವಿದ್ಯಾಸಂಘದ ಕಾರ್ಯವೈಖರಿ ಏನೆಂಬುವುದು ನಮ್ಮ ಸಮಸ್ತ ಜನಾಂಗಕ್ಕೆ ತಿಳಿಯುತ್ತದೆ ಎಂದು ಕಳಕಳಿಯಿಂದ ಕೇಳಿಕೊಳ್ಳುತ್ತೇನೆ.

○ ಇಂದ್ರಕುಮಾರ್, ಮಡಿಕೇರಿ.

---

## ಗಾದೆಗಳು

ಜ್ಯೋತಿ ಉರಿಯುವ ಮನೆ ನೀತಿ ಹೆಚ್ಚು

ಬಾಳೆಗೊಂದೆ ಗೊನೆ ಬಾಳಿಗೊಂದೆ ಗುರಿ

ಅಜ್ಜಿ ಇಲ್ಲದ ಮನೆ ಮಜ್ಜಿಗೆ ಇಲ್ಲದ ಊಟ

ತಾಯಿ ಇದ್ದರೆ ತವರು ಮನೆ ನೀರು ಇದ್ದರೆ ಬಾವಿ

ತಿಳಿದವರು ಹೇಳಿದ್ದೇ ಗಾದೆ ಹಿರಿಯರು ಹೇಳಿದ್ದೆ ಪುರಾಣ

○ ಮುಕ್ಕಾಟಿ ಮಮತ ಪೂಣಚ್ಚ, ಹೊಸ್ಕೇರಿ.

## ಅರೆ ಭಾಷಿಕ ವಿಭಾಗ

ಒಂದೇ ಸಮನೆ ಸುರೀತಿದ್ದ ಮಳೆಗೆ ಕೋಳಿಗೆಲ್ಲ ಕೊಟ್ಟಿಗೆಲಿ ಕುದ್ದಿದ್ದೊ. ಒಂದೆರಡ್ ಗಂಟೆ ಸುಸ್ತ ಮಳೆ ಹಣ್ಣಾನಿತ್ತಂಗಾತ್, ಬಿಸ್ಲ್ ಬಾತ್. ಕೋಳಿಗ ರೆಕ್ಕೆ ಪುಕ್ಕ ಬಿಚ್ಚಿ ಬಿಸ್ಲ್‌ಲಿ ಬಿದ್ದ್‌ಕಂಡ್ ಬಿಸಿ ತಾಂಗಿಸಿಕಂಡ್ ಸುಖ ಪಡ್ತಾ ಇದ್ದೊ. ಮತ್ತೆ ಅಲ್ಲಿಂದ ಎದ್ದ್ ಅತ್ತ, ಇತ್ತ ಮೇಚಿ ಹುಡ್ಕಿಕಂಡ್ ಹೊರಟೊ. ಇತ್ತಂದ ಕೋಳಿಗ ಮೇಚಿಗೆ ಹೊರಟಂಗೆ ಅತ್ತಂದ ಕುದ್ಕ ಇತ್ತ ಹೊರಟತ್. ಅಲ್ಲಿ ಮೂಸಿ ಇಲ್ಲಿ ಮೂಸಿಕಂಡ್ ಬಂದ ಕುದ್ಕಂಗೆ ಕೋಳಿಗ ಮೇಚಿ ಮಾಡ್ದು ಕಂಡತ್. ಅಬ್ಬಾ! ನನ್ನ ಪೂರ್ವ ಜನ್ಮದ ಪುಣ್ಯಂತ ಗ್ಯಾನ ಮಾಡಿಕಂಡ್ ಗಡದ್ದಾಗಿ ಕೋಳಿ ಊಟಮಾಡ್ನೆಂತ ಮರದ ಬುಡಲಿ ಅಡ್‌ಂಗಿ ಕುದ್ದತ್. ಯಾವುದನ್ನ ಹಿಡಿಯೊದು ? ಹುಂಜನೇ ಹಿಡ್ದರೆ ಹೆಂಗೆ ? ಬೇಡ ಬೇಡ ಅದರ ಹಿಡ್ದರೆ ನಾಕ್ ಊರಿಗೆ ಕೇಳ್ವಂಗೆ ಕೊರ್ರ್ರಗುಟ್ಟದೆ. ಮನೆಯವುಕೆ ಎಚ್ಚರಾಗಿ ಬಂದರೆ ನನ್ನ ಬೆನ್ನ್ ಹೊಡಿ ಮಾಡ್ದೊ. ಹಂಗಾರೆ ಯಾವುದಾದು? ಲಾಕಿಗ ಒಳೊ. ಛೀ ! ಆ ಲಾಕಿಗ ಯಾವ ಲೆಕ್ಕ? ಆನೆ ಹೊಟ್ಟೆಗೆ ಹಲ್ಸಿನ ತೋಳೆ ಸಿಕ್ಕಿದಂಗೆ ಅಷ್ಟೆ. ಆ ಮೊಟ್ಟೆಹೇಂಟೆನೇ ಬೆಸ್ಟ್. ಯಾಕೆ ಗೊತ್ತುಟ? ಅದರ ಹಿಡ್ಯಕೂ ಸುಲಭ. ಹೇಂಟೆಗೆ ಓಡಿಕೂ ಬತ್ತದೆ, ಹಾರಿಕೂ ಬತ್ತದೆ ಸಿಕ್ಕಿಕಂಡದೆ. ಸಿಕ್ಕರೆ ತಿಂಬಕೂ ರುಚಿಯಾಗಿದ್ದದೆಂತೆಲ್ಲಾ ಗ್ಯಾನ ಮಾಡಿಕಂಡಿರ್ಕನ ಕೋಳಿಗ ಬಂದೇಬುಟ್ಟೊ. ಕುದ್ಕ ನೆಲ ಕಚ್ಚಿ ಮಲ್ಗಿಕಂಡ್ ಸಾರಿಯಾಡಿಕಂಡ್, ಸಾರಿಯಾಡಿಕಂಡ್ ತೆಗ್ದ್ ಹಾರಿ ಹೇಂಟೆನ ಹಿಡ್ದೇ ಹಿಡ್ತ್. ಆಗ ಕೋಳಿಗೆಲ್ಲಾ ಬಾಂಬ್ ಸಿಡ್ದಂಗೆ ಕೊಟಕೊಟಾಂತ ಹಾರ್ದೊ. ಕುದ್ಕದ ಬಾಯಿಲಿದ್ದ ಹೇಂಟೆ ಕೊರ್ರ್ರೇ ಕೊರ್ರ್ರೇಂತ ರೆಕ್ಕೆ ಬಡ್ದಾಡಿಕಂಡ್ ಜೀವಕ್ಕಾಗಿ ಭಿಕ್ಷೆ ಬೇಡ್ತಾ ಉಟ್ಟ್. ಈ ಎಲ್ಲಾ ಸದ್ದ್‌ಗೆ ಮನೆಯವು ಎಚ್ಚರಾದೊ. ಅಯ್ಯೊ, ಮಕ್ಕ ಎಲ್ಲ ನಾಯಿ ಬುಟ್ಟ್‌ಕಂಡ್, ಚೂ... ಅದ್ದಾ... ಹಿಡಿ.... ಹಿಡೀ...ಂತ ಬೊಬ್ಬೆ ಹೊಡ್ಕಂಡ್ ಇತ್ತ ಓಡಿ ಬರ್ತಾ ಇರ್ಕನ ಕೋಳಿ ಕುದ್ಕನ ಬಾಯಿಂದ ಬುಟ್ಟ್ ಹೋತು. ಆಗ ಕುದ್ಕ ಮತ್ತೊಮ್ಮೆ ಹಾರಿ ಹಿಡ್ದ್‌ಬೇಲಿ ನುಗ್ಗುವ ಹೊತ್ತಿಗೆ ನಾಯಿಗ ಬಂದೇಬುಟ್ಟೊ. ಕುದ್ಕ ಬದ್ಕಿರೆ ಬೇಡಿ ಯಾರ್ ತಿನ್ನಕ್‌ಂತ ಕೋಳಿನ ಬುಟ್ಟ್ ಓಡ್ತ್. ಕೋಳಿ ಕೊಸ್ಕ್ ಕೊಸ್ಕ್‌ಂತೇಳ್ಕಂಡ್ ಬಿದ್ದ್ ಒದ್ದಾಡ್ತಾ ಇರ್ಕನ ಮನೆಯವು ಅಲ್ಲಿಗೆ ಎತ್ತಿದೊ. ಕೋಳಿನ ಎತ್ತಿಕಂಡೊ. ಒಮ್ಮೆ ಮೈ ಅಲ್ಲಾಡ್ಸಿದ ಕೋಳಿ ಸತ್ತೇ ಹೋತು.

ಇತ್ತ ಗಂಡ ಗುಡಿಹೊದ್ದ್ ಮಲ್ಗಿತ್ತ್. "ಹೋಗಿನೆ

## ನಿಮ್ಮ ಕೋಳಿಗೆ ಎರ್ಡ್ ತಲೆ ಉಟ್ಟ ?

ಮಕ್ಕಳೆ ಕೋಳಿ ಸಿಕ್ಕಿತ್‌ತ ಅಪ್ಪಂಗೆ ಹೇಳಿ"ಂತ ಅವ್ವ ಹೇಳ್ಕನ ಮಕ್ಕ ಓಡಿಹೋಗಿ ಹೇಳ್ದೊ. ಆಗ ಅಪ್ಪ "ಯಂತ ಮಕ್ಕಳೇ ಕೋಳಿ ಸಿಕ್ಕಿತಾ? ಒಳ್ಳದಾತ್. ಅಚ್‌ಕಟ್ಟ್ ಮಾಡಿ"ಂತ ಗುಡಿಯೊಳ್ಗೆ ತಿರ್ಗಿ ಮಲ್ಗಿತ್. ಅವ್ವ ಮಕ್ಕ ಸೇರಿಕಂಡ್ ತೊಪ್ಪುಟಕಿತ್ತೊ. ಹೊಟ್ಟೆ ಬಗೆಕನ ನಾಳೆ ಇಕ್ಕಿಕೇಂತ ಇದ್ದ ಮೊಟ್ಟೆನ ನೋಡಿ "ಅಯ್ಯೋ ನಾಳೆ ಹಾಕಕಾದ ಮೊಟ್ಟೆ ಇತ್ತಲ್ಲಾ, ಇಲ್ಲಿ ನೋಡಿನೆ ಮಕ್ಕಳೇ ಮಣಿ ಮಣಿನಂಗೆ ಹೊಟ್ಟೆತುಂಬಾ ಮೊಟ್ಟೆ. ಆ ಕುದ್ಕನ ದೊಂಡೆ ಕಟ್ಟೇಹೋಗಲಿಂತೆಲ್ಲ ಅವ್ವ ಬಯ್ಕಂಡದೆ. ಒಗ್ಗರಣೆ ಹಾಕಿ ಮಾಸನ ಬೇಯಕೆ ಇಸಿತ್. ಉಪ್ಪು ಹಾಕಿ ಮುಚ್ಚಿತ್. ಮೆಣ್ಸ್ ಕಡ್ದ್ ಇಸ್‌ಕನ ಹಟ್ಟಿಗೆ ದನಗಳೂ ಬಂದೊ. ನೋಡಿಕಣಿನೇ, ನಾ ಹೋಗಿ ದನ ಕಟ್ಟಿ ಬನ್ನೆಂತ ಅವ್ವ ಹಟ್ಟಿ ಕಡೆ ಹೋತು. ಇಲ್ಲಿ ಮಾಸ ಬೆಂದವಾಸನೆ, ಮೆಣ್ಸದ್ ವಾಸನೆ ಕೂಡಿಕಂಡ್ ಇಡೀ ಮನೇಲಿ ಅಡಿಗೆದ್ ಗಮ್‌ಗಮಾ ಹೊಡೀತಾ ಇತ್ತ್. ಹಿಂಗೆ ಗಮನ ಹೊರ್ಡ್‌ಕನ ಅಪ್ಪ ಮೆಲ್ಲೆ ಕಂಬಳಿಂದ ಹೊರ್ಗೆ ಬಾತ್. ಎದ್ದ್ ಬಂದ್ ಎಲ್ಲಿ ಮಕ್ಕಳೆ ಹಣ್ಣಾ ಜಾಗ ಬುಡಿನೆ. ಹಾಳ್ ಸಳಿ ಬುಡುದೇಲೆಂತ ರಾಗ ಎಳ್ದ್ ಒಲೆ ಬುಡಲಿ ಕುದ್ದತ್ ಆ ಸಡೆ ಕೂಡಿನೆ ಮಕ್ಕಳೆ. ಮಾಸ ಬೆಂದುಟಾಂತ ನೋಡ್ನೇಂತ ಸೆಡೆನ ತಕಂಡ್ ಗೈಪುನ ಮೊಗ್‌ಚಿತ್. ಒಂದ್ ತುಂಡು ತಕಂಡ್ ಕಚ್ಚಿತ್. ಓಹೋ.... ಮೂಳೆಂದ ಮಾಸ ಬುಡ್ತಾ ಉಟ್ಟ್, ಬೆಂದುಟು. ಜಾಸ್ತಿ ಬೇಯಕಾಗದ್‌ಂತ ಹೇಳಿಕಂಡ್ ಇನ್ನೊಂದು ತುಂಡುನೂ ತಿಂತ್. ಮಕ್ಕಳಿಗೂ ಕೊಟ್ಟತ್. ಅಷ್ಟೊತ್ತಿಗೆ ಆ ಕುಪ್ಪಿ ಅಡೀಲಿದ್ದ ಎನ್.ಎಸ್.ನೂ ಗಲಾಸಿಗೆ ಬಗ್ಗಿಸಿಕಣ್ತ್. ಕುಡ್ಕಂಡ್ ಕುಡ್ಕಂಡ್ ಒಳ್ಳೊಳ್ಳ ತುಂಡುಗಳ್ನ ತಿಂಬಕೆ ಶುರು ಮಾಡ್ತ್. ಮಕ್ಕಳೂ ಅಪ್ಪನೊಟ್ಟಿಗೆ ಕೂಡಿಕಂಡ್ ಸಮಾ ತಿಂದೊ. ಕಡೆಗೆ ಚಟ್ಟಿಲಿ ಒಳ್ದದ್ ತಲೆ, ಕಾಲ್, ರೆಕ್ಕೆ, ಮೂಳೆ ಅಷ್ಟೆ. ಅಪ್ಪ ಕೈ ನೆಕ್ಕಿಕಂಡ್ ಒಲೆ ಬುಡಂದ ಎದ್ದತ್. ಗಂಡ್‌ಜನ ಕೋಳಿ ಕಾಲ್ ತಿಂಬಕಾಗದ್‌ಗಡ! ಯಾಕಂತೇಳ್ರೆ ಅವು ಮರ ಹತ್ತ್‌ಕನ ಕಾಲ್ ನಡ್ಗಿದೆ, ಹಿಂಗೆ ಯಾರೋ ಹೆಣ್ಣ್ ಮಕ್ಕ ಬುದ್ಧಿ ಉಪಯೋಗಿಸಿ ಈ ಪದ್ಧತಿನ ಜಾರಿಗೆ ತಂದದ್ ಒಳ್ಳದಾತ್. ಸಧ್ಯ ಹೆಣ್ಣ್ ಮಕ್ಕಳಿಗೆ ಈ ಕಾರಣಂದಾರ್ ಕೋಳಿ ಕಾಲ್ ತಿಂಬಕೆ ಸಿಕ್ಕಿದೆ. ಇಲ್ಲರೆ ಆ ಕಾಲ್‌ಗಳ್ನೂ ಗಂಡ್‌ಜನ ಗುಳುಂ ಮಾಡ್ತಿದ್ದೊ. ಅದಿರ್ಲಿ, ಹಿಂಗೆ ಚಟ್ಟಿ ಖಾಲಿ ಆಗ್ತಾ ಇರ್ಕನ ಅವ್ವ ಹಟ್ಟಿ ಕಡೆಂದ ಬಾತ್. ಬಂದಂಗೆ ಚಟ್ಟಿನ ನೋಡ್ತ್. ಅಲ್ಲಿ ನೋಡ್ರೆ ಎಂತುಟ್ಟ್? ತಲೆ, ಕಾಲ್, ಕಣಕಣಾಂತ ಉರುಳುವೆ. ಬಾಕಿ?......? ಅವ್ವಂಗೆ ಸಿಟ್ಟ್‌ನೆತ್ತಿಗೇರ್ತಾ ಉಟ್ಟ್.

ಇನ್ನೇನ್ ಗಂಡಸೊಟ್ಟಗೆ ರಂಪ ಮಾಡೊಕೊಂತ ಗ್ಯಾನ ಮಾಡ್ಕನ ಹೊರ್ಗ್ಗಿಂದ "ಮನೆಲಿ ಯಾರ್‌ಒಳರೀ"ಂತ ಕರ್ದ್ದಂಗಾತ್ "ಮನೇಲಿ ಯಾರಿರೊಕು. ನಾವೇ ಮನೆಯವು ಇರ್ದು"ಂತ ಅಪ್ಪ ದೊಂಡೆ ದಪ್ಪ ಮಾಡಿ ಹೇಳಿಕಂಡ್ ಹೊರೆಗೆ ಹೋಕನ ನೆಂಟ ನಿತ್ತುಟು. ನೆಂಟ ಮತ್ತಿನ್ಯಾರೂ ಅಲ್ಲ. ಹೆಣ್ಣ್‌ನ ಅಣ್ಣ !! ಓ ಬನ್ನಿ ಭಾವಾ ಬನ್ನಿಂತ ಅಪ್ಪ ಕರ್ಸ್ತ್. ಅವ್ವ ಕಣ್ಣ್‌ನೀರ್ ಒರ್ಸಿಕಂಡ್ ಕಾಲ್ಗೆ ನೀರ್ ಕೊಟ್ಟತ್. ಮಕ್ಕ ಮಾವನ ಕಾಲಿಗೆ ಬಿದ್ದೊ.

ಅದ್ ಇದ್ ಮಾತೆಲ್ಲ ಆತ್. ಕಾಫಿ ಗೀಫಿ ಕೊಟ್ಟಾತ್. ರಾತ್ರೆ ಆಗ್ತಾ ಉಟ್ಟು. ಮನೆ ತುಂಬಾ ಕೋಳಿ ಮಾಸದ ಗಮನ ಹಬ್ಬಿಟ್ಟು. ಆದ್ರೆ ಊಟಕ್ಕೆ ಮಾಸ ಇಲ್ಲೆ. ಯಂತ ಮಾಡ್ದು. ಇಂಥಾ ಗಂಡನ ಕಟ್ಟಿಕಂಡ ನನ್ನ ಹಣೆಬರ ಹಿಂಗಾತಲ್ಲಾಂತ ಬೇಜಾರ ಮಾಡಿಕಂಡ್ ಅವ್ವ ಇನ್ನೊಂದು ಕೋಳಿನ ಕುತ್ತಿಗೆ ಮುರ್ದ್ತ್. ಇಷ್ಟೆಲ್ಲಾದ್ರೂ ನೆಂಟನಕ್ಕಲೆ ಅಪ್ಪಮಕ್ಕ ಕೂಡಿಕಂಡ್ ಇಡೀ ಕೋಳಿನ ಒಲೆ ಮೇಲಿಂದಲೇ ತಿಂದರ ಮಾತ್ರ ಹೇಳ್ತ್‌ಲೆ. "ಒಳಗಿನ ಗುಟ್ಟು ಶಿವನೇ ಬಲ್ಲ"ಂತ ಹೇಳ್ವಂಗೆ ಅಣ್ಣನೊಟ್ಟಗೆ ಗಂಡನ ಬಗ್ಗೆ ದೂರು ಹೇಳ್ವ್ದು ಸರಿಯಲ್ಲಂತ ಸುಮ್ಮನಾತ್. ಸರಿ, ಗೈಪೂ ಆತ್. ಎಂಟತ್ತ್ ರೊಟ್ಟಿನೂ ಮೆತ್ತಿತ್. ಊಟಕ್ಕೆ ಕುದ್ದೊ. ಗಂಡ ಹೆಣ್ಣ್‌ನ ಮುಖ ನೋಡಿಕಿಲ್ಲೆ. ಹೆಣ್ಣ್ ಸಾ ಹಂಗೇ ಮಾಡ್ತ್. ಬೆಸೆಗೆಲಿ ಒಂದೆರಡ್ ಹೋಳುನ ಇಸಿತ್. ಅಣ್ಣನ ಬಟ್ಲಗೆ ಗೈಪು ಇಕ್ಕಿತ್. ಗಡಿಬಿಡಿಲಿ ಇಕ್ಕ್‌ಕಾಕನ ಏನಾತ್ ಅಣ್ಣನ ಬಟ್ಲಗೆ ಎರ್ಡ್ ಕೋಳಿ ತಲೆ ಬಿದ್ದೋತು. ಇದೇನ್ ನೀ ಕೊಂದದ್ ಒಂದು ಕೋಳಿ. ಇಲ್ಲಿ ನೋಡ್ರೆ ಎರ್ಡ್ ತಲೆ ಉಟ್ಟಲೆ. ನಿಮ್ಮ ಕೋಳಿಗೆ ಎರ್ಡ್ ತಲೆ ಉಟ್ಟಾಂತ ಆಶ್ಚರ್ಯಪಟ್ಟ್‌ಕಂಡ್ ಅಣ್ಣ ಕೇಳ್ತಾಉಟ್ಟು. ಗಂಡ ಹೆಣ್ಣ್ ಮುಖ ಮುಖ ನೋಡಿಕಂಡೊ. ಹೇಳ್‌ಬಡಾಂತ ಗಂಡ ಕಣ್ಣ್‌ಲಿ ಬಾಯಿಲಿ ಸನ್ನೆ ಮಾಡ್ತಾ ಉಟ್ಟು. ಈ ಪೀಕಲಾಟನ ಮಕ್ಕಳೂ ನೋಡ್ತಾಒಳೊ, ಕುಟುಕುಟುಂತ ನಗಾಡ್ತ ಒಳೊ. ಒಳಗೊಳಗೆ ಸಿಟ್ಟ್ ಕೊದೀತಾ ಇತ್ತಲ್ಲ, ಅದೆಲ್ಲಾ ರಟ್ಟೆ ಹೋತು. ನಗೆ ತಡೆಕೆ ಬೊತ್ತದೆ ಅಪ್ಪ ಅವ್ವ ಮಕ್ಕ ಎಲ್ಲ ಸೇರಿಕಂಡ್ ಜೋರಾಗಿ ನಗಾಡ್ತಾ ಒಳೊ. ನೆಂಟಂಗೆ ಇದರ ತಲೆ ಬಾಲ ಒಂದೂ ಗೊತ್ತಾತ್ಲೆ. ಬುಟ್ಟ ಬಾಯಿ ಬುಟ್ಟಂಗೆ ನೆಂಟ ಕುದ್ದ್‌ಕಣ್ತ್. ಮತ್ತೆ ಅವ್ವನೇ ಅಪ್ಪನ ಶೂರತನನ ನಗಾಡಿಕಂಡೇ ಹೇಳ್ಕನ ಅಣ್ಣನೂ ಬಿದ್ದ್ ಬಿದ್ದ್ ನಗಾಡ್ತ್.

● ಬಿ. ಆರ್. ಜೋಯಪ್ಪ, ಮಡೆ

# ಉದ್ಯೋಗ ವಾರ್ತೆ

ಭಾರತೀಯ ವಾಯು ಪಡೆಯ ತಾಂತ್ರಿಕ ಮತ್ತು ತಾಂತ್ರಿಕೇತರ ವೃತ್ತಿಯಲ್ಲಿಯ ಏರ್‌ಮನ್‌ಗಳ ನೇಮಕಾತಿಗಾಗಿ ಏರ್‌ಮನ್ ಆಯ್ಕೆ ಸಮಿತಿ ಸೆಪ್ಟಂಬರ್ 2 ಮತ್ತು 3 ರಂದು ಮಂಗಳೂರಿನಲ್ಲಿ ನೇಮಕಾತಿ ಶಿಬಿರವನ್ನು ನಡೆಸಲಿದೆ.

ಪ್ರಪ್ರಥಮ ಬಾರಿಗೆ ಕರ್ನಾಟಕ ಅಭ್ಯರ್ಥಿಗಳಿಗೆ ಮಾತ್ರ ನಡೆಸಲಾಗುತ್ತಿರುವ ಆಯ್ಕೆ ಶಿಬಿರದಲ್ಲಿ ಪಾಲ್ಗೊಳ್ಳಲು ಪದವಿ ಪೂರ್ವ ಅಥವಾ 10–12 ಪರೀಕ್ಷೆಗಳಲ್ಲಿ ಆಂಗ್ಲಭಾಷೆ, ಗಣಿತ ಶಾಸ್ತ್ರ ಮತ್ತು ಭೌತಶಾಸ್ತ್ರಗಳೊಂದಿಗೆ ಸರಾಸರಿ ಕನಿಷ್ಠ ಶೇ. 50ರಷ್ಟು ಅಂಕಗಳಿಸಿರುವ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರು. ಮೆಕಾನಿಕಲ್, ಎಲೆಕ್ಟ್ರಾನಿಕ್,ಎಲೆಕ್ಟ್ರಿಕಲ್, ಆಟೋಮೊಬೈಲ್, ಕಂಪ್ಯೂಟರ್ ಸೈನ್ಸ್ ಹಾಗೂ ಇನ್‌ಸ್ಟ್ರುಮೆಂಟೇಷನ್ ಟೆಕ್ನಾಲಜಿಯಲ್ಲಿ 3 ವರ್ಷಗಳ ಡಿಪ್ಲೊಮೋ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದು, 1978ರ ಮಾರ್ಚ್ 1 ಹಾಗೂ 1982ರ ಮಾರ್ಚ್ 1ರ ನಡುವೆ ಜನಿಸಿರುವ ಅಭ್ಯರ್ಥಿಗಳು ತಾಂತ್ರಿಕ ವೃತ್ತಿ ಹುದ್ದೆಗಳಿಗೆ ಅರ್ಹರಾಗಿರುತ್ತಾರೆ. ಮೆಟ್ರಿಕ್ಯುಲೇಷನ್ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಸರಾಸರಿ ಕನಿಷ್ಠ ಶೇಕಡಾ 45ರಷ್ಟು ಅಂಕ ಗಳಿಸಿರುವ 1980ರ ಮಾರ್ಚ್ 1 ಮತ್ತು 1983ರ ಮಾರ್ಚ್ 1ರ ನಡುವೆ ಜನಿಸಿರುವ ಅಭ್ಯರ್ಥಿಗಳು ತಾಂತ್ರಿಕೇತರ ವೃತ್ತಿಗಳಿಗೆ ಅರ್ಹರಾಗಿರುತ್ತಾರೆ.

ತಾಂತ್ರಿಕ ಅಭ್ಯರ್ಥಿಗಳಿಗೆ ಗಣಿತ ಶಾಸ್ತ್ರ, ವಿಜ್ಞಾನ, ಆಂಗ್ಲಭಾಷೆ ಹಾಗೂ ಐ ಅಂಡ್ ಜಿಎ ವಿಷಯಗಳಲ್ಲಿ ಪರೀಕ್ಷೆ ನಡೆಸಲಾಗುವುದು.

ಅರ್ಹ ಹಾಗೂ ಆಸಕ್ತ ಅಭ್ಯರ್ಥಿಗಳು ತಮ್ಮ ವಿದ್ಯಾರ್ಹತೆ ಹಾಗೂ ಅಂಕ ಪತ್ರದ ಮೂಲ ಪ್ರತಿಗಳು ಮತ್ತು ಪಾಸ್ ಪೋರ್ಟ್ ಅಳತೆಯ ಇತ್ತೀಚಿನ ಮೂರು ಭಾವಚಿತ್ರಗಳೊಂದಿಗೆ ನೇಮಕಾತಿ ಶಿಬಿರಕ್ಕೆ ನೇರವಾಗಿ ಹಾಜರಾಗಬಹುದು ಎಂದು ಅಧಿಕೃತ ಪ್ರಕಟಣೆ ತಿಳಿಸಿದೆ.○

## ಅಂದ್ - ಇಂದ್

ಅಂದ್ : ಮುತ್ತ್ ಕೊಡ್ಯಾಕನ ಚುಚ್ಚಿದೇಂತ ಹೇಳ್ದ
ಹೆಣ್ಣ್‌ನ ಮಾತಿಗೆ ಬೆಲೆ ಕೊಟ್ಟ್
ಬೋಳ್ಸಿಕಂಡೆ ನಾನ್ ನನ್ನ ಮೀಸೆನ....

ಇಂದ್ : ಸುಟ್ಟದರ ಕಟ್ಟೆಕಂಡ ತಪ್ಪಿಗೆ
ಮನಾರ ಮಾಡಿಟ್ಟು ನನ್ನ
ಕಾರಣ....ತೀರ್ಸಿಕೆ ಬೊತ್ತದೆ ನಂಗೆ ಅವ್ಳಆಸೆನ...

○ ಕಾನೆಹಿತ್ಲು ಜಯಪ್ರಕಾಶ್, ಸೋಮವಾರಪೇಟೆ

## ಧಾರವಾಹಿ - 9

ಮೂಲಕಥೆ : ಅಶ್ವಥಿ ಅರವಿಂದ್
ಅರೆಭಾಷೆಗೆ : ಎಂ.ಇ. ಮುಹಮ್ಮದ್

# ಕರಿ ಚೆನ್ನ

**ಕಳ್ದ ಸಂಚಿಕೆಲಿ**

ಡಾಕ್ಟರ್ ಏನೇ ಹೇಳ್ರೂ ಗೌರ ಅಭಾರ್ಷನ್ ಮಾಡ್ಸಿಕೆ ತಯಾರಿಲ್ಲೆ. ರಂಜನ್ ಅವಳ್ನ ವಾಪಸ್ ಹೊಟೇಲಿಗೆ ಕರ್ಕಬಂದ್ ಚಿತ್ರ ಹಿಂಸೆ ಕೊಟ್ಟದೆ. ನೀನ್ ಆ ಕೂಸ್‌ನ ಹೆರ್, ಆ ಗಳ್ಗೆಲೆ ಅದರ ಕರ್ಳ್ ಎಳ್ದ್ ಹೊಳೆಗೆ ಬಿಸಾಕಿನೆ ತೇಳಿ ರೂಂ ಹೊರ್ಗೆಂದ ಬಾಗ್ಲ್ ಹಾಕಿ ಅಂವ ಹೊರಗೆ ಹೋದೆ. ಅವ್ವು ಎದ್ದ್, ಬಿದ್ದ್, ಹೊರಳಾಡಿ ಬಾಗ್ಲ್ ತೆಗ್ಯಕೆ ನೋಡ್ದೆ. ಹೊಟ್ಟೆ ಹಸ್ತ್, ಅಲ್ಲೇ ಇದ್ದ ನೀರ್ನ ಕುಡ್ದದೆ. ಆಗ ಅವ್ವು ಮನೆಯವರ್ನೆಲ್ಲಾ ಗ್ಯಾನ ಮಾಡಿಕಂಡ್ ಮರ್ರದೆ. ಅಷ್ಟೊತ್ತಿಗೆ ರಂಜನ್ ವಾಪಸ್ ರೂಂಗೆ ಬಂದ್ ಅ..ಳ್ನ ನಿನ್ನ ಮನೆಗೆ ಪೋಯಿ ತೇಳಿ ಹೊರ್ಡಿಸಿ, ನಿನ್ನ ಅಪ್ಪಂಗೆ ನನ್ನ ಮೇಲೆ ಕೇಸ್ ಹಾಕಿಕೆ ಹೇಳ್ ತೇಳ್ದೆ.

ಮುಂದೆ ಓದಿ.........

"ಪ್ರೀತಿ ತೋರ್ಸಿ, ನನ್ನ ನಂಬ್ಸಿ, ನನ್ನ ಕನ್ನಿ ದೇಹನ ಇಷ್ಟಬಂದಂಗೆ ಅನುಭವಿಸ್ಕಂಡ್, ಹಿಂಗೆಲ್ಲ ಹೇಳಿಕೆ ನಿಂಗೆ ಮನಸ್ಸು ಬಂದದೆಲ್ಲ, ನೀನ್ ಕರಿಯಕಾಕನ ಹಿಂದೆ ಮುಂದೆ ಗ್ಯಾನ ಮಾಡ್ದೆ ನಾನ್ ಹೊರಟ್ ಬಂದೆ. ಬೆಲೆಕಟ್ಟಿಕೆ ಸಾಧ್ಯ ಇಲ್ಲದಂತದ್ನೆಲ್ಲ ನಿಂಗೆ ಯಾವ ಬೇಜಾರೂ ಮಾಡ್ಕಣದೆ ಕೊಟ್ಟೆ. ಆದ್ರೂ......"

ಅವ್ವಿಗೆ ಮುಂದೆ ಹೇಳಿಕೆ ಸಾಧ್ಯ ಆತ್‌ಲೆ. ಅವ್ವು ಮರ್ಗ್ಕಿಕೆ ಸುರ್‌ಮಾಡ್ತ್.

"ಓ...ಬೆಲೆ ಕಟ್ಟಿಕೆ ಸಾಧ್ಯ ಇಲ್ಲದಂತದ್ ಯಾವ್ದುನೆ ಗೂಡೆ? ಇಪ್ಪತ್ತೈದ್ ರೂಪಾಯಿ ಬಿಸಾಕಿರೆ ಈ ಹೊಟೇಲ್ ರೂಂಲಿ ನಿನಗಿಂತ ಬೆಲೆನ ಗೂಡೆಗ ಸಿಕ್ಕುವೆ. ಗೊತ್ತಾ ನಿಂಗೆ?"

ಗೌರ ಮುಂದೆ ಮಾತಾಡಿಕೆ ಹೋತ್‌ಲೆ. ಕಣ್ಣ್ ಒರ್ಸಿಕಂಡ್ ಅವ್ವು ಮರ್ಗ್‌ತಾ ಕುದ್ದ್ ಕಣ್ತ್.

ರಂಜನ್ ರೂಮ್‌ನ ಬಾಗ್ಲ್ ಹಾಕಿ, ಕೀನ ಕೌಂಟರ್‌ಲಿ ಕೊಟ್ಟತ್. ಗೌರ ಅವನ ಹಿಂದೆ ಹೋತ್.

ಅಷ್ಟ್ರಲಿ ರೂಂ ಬಾಯಿ ಒಮ್ಮೆ ಅವರ್ನ ನೋಡಿಕಂಡ್ ಹಲ್ಲ್ ಬುಟ್ಟತ್. ಅದ್ರ ಗೌರ ನೋಡಿಯೂ ನೋಡದಂಗೆ ನಡ್ತ್. ಇಬ್ಬರೂ ಹೋಗಿ ಜೀಪಿಗೆ ಹತ್ತಿದೊ. ರಂಜನ್‌ಗಿಂತ ಒಂದಡಿ ದೂರಲಿ ಗೌರ ಕುದ್ದತ್. ಅವ್ವಿಗೆ ಹಳೇ ಸಂಗತಿ ಎಲ್ಲ ಗ್ಯಾನ ಆತ್.

ಸಣ್ಣದರ್ಲಿ ರಂಜನ್ ತನ್ನ ಮನೆಗೆ ಬಂದ್‌ಕಂಡ್ ಇದ್ದದ್, ಅವನೊಟ್ಟಿಗೆ ಜೀವನ್ ಕೂಡ ಇದ್ರೂ ಅಂವ ನಾಚಿಕೆ, ನಾಚಿಕೆ ಆಡ್‌ತಿದ್ದದ್, ತನ್ನ ಮಮ್ಮ ಕೈಯಿಂದ ಅದ್ ಇದ್ ಕೇಳಿ ತಿನ್‌ತಿದ್ದದ್ ಎಲ್ಲ ಅವ್ವಿಗೆ ಗ್ಯಾನ ಬಾತ್.

ಅದೇ ರಂಜನ್ ಬೆಳ್ದ್ ಈಗ ಒಬ್ಬ ಮೋಸಗಾರ, ರೌಡಿ ತರ ವರ್ತಿಸುದು ಕಂಡ್ ಅವ್ವಿಗೆ ತುಂಬ ದುಃಖ ಆತ್. ವೆಂಕಟ್ರಮಣಾ, ರಂಜನ್‌ಗೆ ನೀನೇ ಒಳ್ಳೆ ಬುದ್ಧಿ ಕೊಡೋಕೂಂತ ಅವ್ವು ದೇವರ್ನ ಬೇಡಿಕಂಡತ್.

ಸಿಟಿ ಬುಟ್ಟಂಗೆ ಜೀಪ್‌ನ ಸ್ಪೀಡ್ ಹೆಚ್ಚಾಚ್ತ್. ಅಂವ ಬೇಕೆಂತೇಳಿ ಆಗಾಗ ಬ್ರೇಕ್ ಹಾಕ್ತಿತ್. ಗೇರ್ ಚೇಂಜ್ ಮಾಡ್‌ತಿತ್ತ್. ಆಗೆಲ್ಲ ಅವ್ವಿಗೆ ಜೀಪ್‌ನ ಡೋರ್ ತಾಗಿ ಮೈ ಕೈ ನೋವಾಗ್ತಿತ್ತ್. ಸುಮಾರ್ ಸಾರಿ ಅವ್ವು ಮಗ್‌ಚಿ ಬೀಳ್ ಕಾಕನ ಗಟ್ಟಿ ಹಿಡ್‌ಕಣ್‌ತ್ತಿತ್ತ್. ಜೀಪ್‌ನ ಹಾರ್ಸಿ ಸಡನ್ ಬ್ರೇಕ್ ಹಾಕಿರೆ ಅವಳ ಹೊಟ್ಟೆಲಿರೊ ಎಳೆಕೂಸ್‌ಗೆ ಪೆಟ್ಟಾಗಿ ಅದ್ ಸತ್ತದೇಂತ ಅವನ ಲೆಕ್ಕಚಾರ. ಆದರೆ ಅಂವ ಗ್ಯಾನ ಮಾಡ್ದಂಗೆ ನಡ್‌ತ್‌ಲೆ. ಜೀಪ್ ಮಧ್ಯರಾತ್ರಿ ಹೊತ್ತ್‌ಗೆ ಬೋರ್‌ಗುಡ್ಡ ಜಂಕ್ಷನ್‌ಗೆ ತಲಪಿತ್.

ಜಂಕ್ಷನ್‌ಲಿ ಗೌರನ ಬಲವಂತವಾಗಿ ಇಳ್ಸಿ ರಂಜನ್ ಜೀಪ್‌ನ ಬುಟ್‌ಕಂಡ್ ಸೀದ ಹೋತ್.

ರಂಜನ್ ಅಂತಾ ದುಷ್ಟತನ ತೋರ್ಸಿದೇತ ಗೌರ ಗ್ಯಾನೇ ಮಾಡಿತ್ಲೆ. ಆ ನಡುರಾತ್ರಿಲಿ ಒಂದ್ ಹೆಣ್ಣ್ ಹೆಂಗ್ಸ್ ಎಂತ ಮಾಡಿಕೆ ಆದೆ? ಅವ್ವಿಗೆ ಹೆದ್ರಿಕೆ ಆಗಿ ಬತ್ತ್. ಅವ್ವು ನಡ್ಗಿಕೆ ಸುರ್‌ಮಾಡ್ತ್.

ದಾರಿ ಕರೇಲಿ ಇದ್ದ ಒಂದ್ ಮರ ಅವಳಿಗೆ ಭೂತದಂಗೆ ಕಂಡತ್. ನಾಯಿ ಬೊಗ್ಳದು ಕೇಳ್ಕನ ಅವ್ವಿಗೆ ನಡಿಯಕೂ ಆಗದೇ ಹೋತು.

ಅಷ್ಟರ್ಲಿ ಅವಳ ಮೇಲೆ ಒಂದ್ ಟಾರ್ಚ್ ಬೆಳಕ್ ಬೀತ್. ಬೋಳಿ ಬಂದ ಕಡೆಗೆ ಗೌರ ನೋಡ್ತ್.

"ಯಾರ್ ನೀನ್?"

ಟಾರ್ಚ್ ಹಿಡ್ದವ ಕೇಳ್ತ್.

"ಈ ಮಧ್ಯರಾತ್ರೆಲಿ ಪಬ್ಲಿಕ್ ರೋಡ್‌ಲಿ ಕೂಡ ಸೂಳೆಗಳ ಕಾಟ ಸುರ್‌ಆಗಿ ಹೋತ್ ಥತ್..."

ಗೌರಂಗೆ ಹಂಗೆ ಹೇಳ್ದ ಜೆನ ಯಾರ್‌ಂತ ಗೊತ್ತಾತ್. ಅದೇ ಫ್ಯಾಕ್ಟ ಮಾದಯ್ಯ. ಆದ್ರೆ ಮಾತಾಡಿಕೆ ಗೌರಂಗೆ ಬಾಯೇ ಬಾತ್‌ಲೆ.

ಫ್ಯಾಕ್ಟ ಮಾದಯ್ಯ ಅವ್ಳ ಮೊಕಕ್ಕೆ ಲೈಟ್ ಹಾಕಿತ್.

"ಅರೆ ಇದ್ ಯಾರ್? ಗೌರಾ?

ಅವಂಗೆ ನಂಬಿಕೆ ಆತ್ಲೆ.

"ಏನಾತವ್ವ ನಿಂಗೆ?"

ಮಾದಯ್ಯ ಕೇಳ್ಕನ ಗೌರ ಜೋರಾಗಿ ಮರ್ಡಿಕೆ ಸುರ್ ಮಾಡ್ತ್.

ಫ್ಯಾಕ್ಟ್ ಮಾದಯ್ಯ ಬೋರುಗುಡ್ಡೆಲಿ ಎಲ್ಲವುಕು ಬೇಕಾದಂವ. ಯಾರ್ದಾರ್ ಮನೆಲಿ ಸಾವ್, ಮೊದ್ವೆ, ತಿಥಿ, ಎಂತ ಇದ್ರೂ ಮಾದಯ್ಯ ಅಲ್ಲಿ ರೆಡಿಯಾಗಿ ಇರ್ತಿತ್ತ್.

ಆರಡಿ ಎತ್ತರ, ಎತ್ತರಕೆ ಸೆರಿಯಾದ ದಪ್ಪ, ಒಂದ್ ಹತ್ತ್ ಜನ ಬಂದರೆ ಒಬ್ಬನೇ ನಿತ್ತ್ ಒಡ್ಸಿಕೆ ತಕ್ಕ ತಾಕತ್ತ್ ಅವಂಗೆ ಉಟ್ಟ್. ಅಂವ ಊರವ್ಕೆಲ್ಲ ಬೇಕಾದಂವ. ಎಷ್ಟೇ ರಾತ್ರಿಯಾದ್ರೂ ಅಂವ ಎಲ್ಲಿಗೆ ಹೋಕು ಹಿಂಜರಿಯುಂವ ಅಲ್ಲ.

ಒಳ್ಳೆ ಮೆಣ್ಸ್ ಬೆಳೆ ಬೋರ್‌ಗುಡ್ಡೆಲಿ ಲಾಯ್ಕ ಇರ್‌ಕಾಕನ ಬಾಚಿ ಮಲೆಯು ಎಲ್ಲರ ಮನೆಗೂ ಮಾದಯ್ಯ ತಲಪ್ತಿತ್ತ್. ಬೆಳೆಗೆ ಬೇಕಾದ ಫ್ಯಾಕ್ಟ್ ಗೊಬ್ಬರಕೆ ಅಡ್ವಾನ್ಸ್ ತಕಂಡ್ ಎಲ್ಲವುಕೆ ಅಂವ ಗೊಬ್ಬರ ಕೊಡ್‌ತಿತ್ತ್. ಅದರ್‌ಂದ ಅವಂಗೆ "ಫ್ಯಾಕ್ಟ್ ಮಾದಯ್ಯ"ತ. ಹೆಸ್ರ್ ಬಂದದ್.

ಎಸ್. ಎಸ್. ಎಲ್. ಸಿ ಕಲ್ತುಟ್ಟ್. ಒಳ್ಳೆ ಭಾಷಣ ಮಾಡಿಕೆ ಬಂದದೆ, ಯಾವುದಾದ್ರ ಅರ್ಜಿ ಬರೆಯುಕೆ, ರಾಜಕಾರಣಿಗಳ ಕಾಂಬಕೆ, ಪ್ರತಿಭಟನೆ, ಕಪ್ಪುಬಾವುಟ ಹಿಡಿಯುಕೆ ಇದ್ಕೆಲ್ಲ ಮಾದಯ್ಯ ಇಲ್ಲದೆ ಸಾಧ್ಯನೇ ಇಲ್ಲೆ. ಎರಡ್ ಹಳೇ ಟೈಪ್ ರೈಟರ್ ಮಿಷನ್ ಇಟ್ಕಂಡ್ ಮಾದಯ್ಯ ತನ್ನ ಹತ್ರ ಬರವುಕೆ ಕನ್ನಡಲಿ ಇಂಗ್ಲಿಷ್‌ಲಿ ಅರ್ಜಿ ಟೈಪ್ ಮಾಡಿಕೊಡ್ತಿತ್ತ್. ರಾಜಕೀಯ ಅವನ ಹತ್ರ ಇತ್ತ್‌ಲೆ. ಪರಸ್ಪರ ಕಂಡರೆ ನಾಯಿ ನಂಗೆ ಆಡುವ ರಾಜಕಾರಣಿಗಳ್ನ ಕಲ್ಲ್ ಹೊಡ್ಡ್ ಕೊಲ್ಲೊಕೂತ ಹೇಳೊಂವ ಆ ಮಾದಯ್ಯ.

ಅಂವ ಒಂದ್ ಸಾವ್ ನೋಡಿಕಂಡ್ ಮನೆಗೆ ವಾಪಸ್ ಬಾಕಾಕನ ಗೌರ್ನ ಕಂಡತ್.

ಅಯ್ಯೋ ನಿಜವಾಗಿಯೂ ಆ ದೇವ್ರ ನನ್ನ ಈ ದಾರಿಗಾಗಿ ಕರ್ಕಂಡ್ ಬಂದದ್. ಏನಾತ್ ಗೌರಾ, ನೀನ್ ಇಸ್ಟ ಹೊತ್ತ್‌ಲಿ ಇಲ್ಲಿ ಒಳಾ ?

ಗೌರ ಬಿಕ್ಕಿ ಬಿಕ್ಕಿ ಮರ್ಡಿಕೆ ಸುರ್ ಮಾಡ್ತ್. ಅವ್ಳ ನಡ್ದ ಸಂಗತಿನೆಲ್ಲ ಮಾದಯ್ಯನೊಟ್ಟಗೆ ಹೇಳ್ತ್.

ನಾಡ್‌ಕೊಲ್ಲಿ ಮಾದಪ್ಪನ ಮಗಳಿಗೆ ಇಂತಾ ಒಂದ್ ಅವಸ್ಥೆ ಬಾತಲ್ಲಾಂತ ಅಂವಂಗೆ ತುಂಬ ಬೇಜರ ಆತ್.

"ಈ ಬೋರುಗುಡ್ಡೆಲಿ ಒಂದ್‌ನೂರ್ ಗೂಡೆಗಳ್ನಾದ್ರೂ ಆ ಬೊಡ್ಡಿ ಮಜ ಹಾಳ್ ಮಾಡಿರ್‌ದು. ಅಸ್ಟ ಹತ್ರಲಿ ಇದ್ದ್ ಕಂಡ್ ನಿಂಗೆ ಅವನ ಮೋಸ ಗೊತ್ತಾತ್ಲೆ ಗೌರ ? ಇನ್ನ್ ಹೇಳಿ ಏನು ಸುಖ ಇಲ್ಲೆ. ಇರ್ಲಿ ಬುಡ್, ಬಾ ನಾವ್ ಮನೆಗೆ ಪೋಯಿ."

ಇಲ್ಲೆ ಮಾದಣ್ಣ ನಾ ಬಾದ್ಲೆ. ನನ್ನ ಪೊಪ್ಪನ, ತಂಗೆನ ಹೆಂಗೆ ನೋಡ್ಲಿ. ನನ್ನ ಈ ಮೊಕ ತಕಂಡ್ ಹೆಂಗೆ ನಾನ್ ಹೋಗ್ಲಿ. ಇಲ್ಲೆ, ನಾನ್ ಯಾವುದಾದ್ರ ಬಾವಿಗೆ ಹಾರಿ ಸತ್ತ್ ಬುಟ್ಟನೆ. ನೀನ್ ನನ್ನ ತಡಿಬಡ ಮಾದಣ್ಣ."

ಗೌರ ಮರ್ಟ್ಕಂಡ್ ಹೇಳ್ತ್.

"ಛೇ ! ಎಂತ ಮಾತ್ ಹೇಳ್ತಾ ಒಳ ನೀನ್. ಒಮ್ಮೆ ಸುಮ್ಮನಿರ್, ನೀನ್ ಸರಿಯಾಗಿ ನಿತ್ತದ್ದೇ ಆದ್ರ ರಂಜನ್ ಅಲ್ಲ ಅವನ ಅಪ್ಪ ಬೋರ್‌ಗುಡ್ಡೆ ದೇವಯ್ಯನೇ ಬಂದರೂ ಅವನ ಕುತ್ತಿಗೆಪಟ್ಟೆ ಹಿಡ್ಡ್ ನ್ಯಾಯ ಕೇಳೊಸ್ಟ ಧೈರ್ಯ ನಂಗೆ ಉಟ್ಟ್, ಹೆದ್ರಬಡ ಬಾ. ಆ ಬೊಡ್ಡಿಮಜನ ಹಂಗೆ ಬುಟ್ರೆ ಅಲೆ. ಫ್ಯಾಕ್ಟ್ ಮಾದಯ್ಯ ಅವುಳಿಗೆ ಧೈರ್ಯ ಕೊಟ್ಟ್ ಅವಳ್ನ ಕರ್ಕಂಡ್ ಹೋತು.

(ಸಶೇಷ)

—: : ಹಾಸ್ಯ ಲೇಖನ : :—

## ಕುಞ್ಞಣ್ಣನ ಕಾಮಿಡಿ

ಮೊನ್ನೆ ಎಂತ ಆತ್ ಗೊತ್ತಾ ?! ನನ್ನ ಫ್ರೆಂಡ್ ಕುಞ್ಞಣ್ಣ ಆ ಮೇಗಡೆ ಮನೆ ಮೋನ (Mona) ಗೂಡೆನ ಹೆಂಗೆಂಗೊ ಮಾಡಿ ಲಾಲ್‌ಬಾಗ್‌ಗೆ ಕರ್ಕಂಡ್ ಹೋತ್ ನನ್ನ ಸ್ಕೂಟರ್ ತಕ್ಕಂಡ್. ಇಂವ ಹ್ಯಾಪ. ಅವ್ಳ ಪೊರ್ಲಾದ ಪ್ಯಾಷನ್ ಗೂಡೆ, ಬಾರಿ ಮಳ್ಳಿ. ಇವನೊಟ್ಟಗೆ ಹೋಕೆ ಅದ್ ಹೆಂಗೆ ಒಪ್ಪಿಕಣ್ತೋ ಗೊತ್ಲೆ. ಲಾಲ್‌ಬಾಗ್‌ಲಿ ಕಲ್ಲ್ ಬೆಂಚ್ ಮೇಲೆ ಕತ್ಲೆಲಿ ಕುದ್ದ್‌ಕಂಡ್ ಇವಂಗೆ...ಮೂಡ್ ಬಂದ್‌ಬುಡ್ತ್ ಗಡ, ಅವ್ಳಿಗೆ ಮುತ್ತ್ ಕೊಡಿಕೆ try ಮಾಡಿಟ್ಟ್ ಅವ್ಳ ಇಷ್ಟ ಇಲ್ಲದವಳಂಗೆ ಕೊಸರಿಯಾಡ್ತ್ ಗಡ. ಆದ್ರೂ ಇಂವ ಬುಡದ್ದೆ ಅವಳ ಬಾಯಿಗೆ ಲೊಚ್‌ಕ್‌ತ ಮುತ್ತ್ ಕೊಟ್ಟ್ ಬುಡ್‌ಕಾಕನ ಅವ್ಳ ಹುಸಿಕೋಪ ತೋರ್ಸಿಕಂಡ್, ಬಾಯಿ ಮರ್ಸಿಕಂಡ್... "ತೂ... Naughty Man" ತೇಳ್ತ್ ಗಡ. ಕುಞ್ಞಣ್ಣ ಪಟ್ಟ್‌ತ ಎದ್ದ್ ನಿತ್ತ್ ಅವ್ನ ಕೆನ್ನೆಗೆ ಫಟೀರ್‌ತ ಒಂದ್ ಪೆಟ್ಟ್‌ಕೊಟ್ಟ್ ಸ್ಕೂಟ್ರ್ ಸ್ಟಾರ್ಟ್ ಮಾಡಿಕಂಡ್ ಸೀದಾ ನಮ್ಮನೇಗೆ ಬಂದ್ ಹಿಂಗಿಂಗೆ ಆತ್‌ತ ನನ್ನತ್ರ ಹೇಳ್ತ್. ನಾನ್ ತಲೆ ಕೆರ್ದ್‌ಕಂಡ್ "ಅಲ್ಲರ...ನೀನ್ ಅವ್ಳಿಗೆ ಹೊಡ್ಡದ್ ಯಾಕೆ ?"ತ ಕೇಳ್ದೆ. ಅದಿಕ್ಕೆ ಅಂವ ಮುಖ ಸಿಂಡ್ರಿಸಿಕಂಡ್ ಹೇಳ್ತ್. "ಅಲ್ಲರ...ನಾನ್ ಮುತ್ತ್ ಕೊಟ್ಟದ್ ಅವ್ಳಿಗೆ ಇಷ್ಟ ಇಲ್ಲದಿದ್ದರೆ ಕತ್ತೆ ಬಾಲ ಹೋತ್. ಅದಿಕ್ಕೆ Not a manತ ಬಯ್ಯೊಕಾ ಸುಟ್ಟವ್ಳ" ನಂಗೆ ನೆಗಾಡೊಕಾ ಮಡೊಕಾ ಗೊತ್ತಾತ್ಲೆ.

○ಎಡಿಕೇರಿ ಸುದರ್ಶನ್, ಬೆಂಗಳೂರು.

**ಮನೆಗೊಂದು ಕೂಸು ಇರ್ಲಿ**
**ಪ್ರತಿ ಗೌಡರ ಮನೆಗೊಂದು**
**ಕೊಡಗು ಸಂಗಾತಿ ಇರ್ಲಿ**

—ವಿಜಯ್

# ಅಪ್ಪನ ಪರದಾಟ, ಅವ್ವನ ಕಿರ್‌ಚಾಟ

ದಿನಾ ಬೆಳಗಾದರೆ ಸಾಕ್, ಯಾಗೋಳ್ ಅಪ್ಪಂಗೆ, ಅವ್ವಂಗೆ ಜಗಳ. ಅದೆಲ್ಲಿ ಇದೆಲ್ಲಿತ ಅವ್ವನ ಕೇಳ್‌ಕಂಡೇ ಇರ್‍ಬ್ಬು. ಅದ್ ಅವ್ವಂಗೆ ಸಿಟ್ಟ್ ಬಾದು.

ಒವ್ಮೆ ಅಪ್ಪ ನಿಂಗಣ್ಣ "ಹಾಳಾದ ನನ್ನ ಬೆಲ್ಟ್ ಕಾಂಬೋದ್ಲೆ. ಅರ್ಜೆಂಟ್ ಆಫೀಸ್‌ಗೆ ಹೊರಡ್‌ಕನ ಒಂದು ವಸ್ತು ಇಟ್ಟಲ್ಲಿ ಇಡ್‌ದ್ಲೆ.

'ಅಪ್ಪ ಗೊಣಗಿಕಂಡ್ ಇತ್ತ್'

ಅವ್ವ ರೊಟ್ಟ ಮಾಡಿಕಂಡ್ ಇತ್ತ್

'ಸಣ್ಣಕ್ಕ, ಸಣ್ಣಕ್ಕ, ನನ್ನ ಬೆಲ್ಟ ಕಂಡನೇ'

---

ಆಜಡ್ಕ ರಾಣಿ ಬಾಲಕೃಷ್ಣ,
ಕುಶಾಲನಗರ

---

'ಅಲ್ಲೆ ಎಲ್ಲಿಯಾರ್ ಇರೊಕು ನೋಡಿ. ನಾನ್ ರೊಟ್ಟ ಮಾಡ್ತಾ ಒಳೆ' ಮಕ್ಕ ಎಲ್ಲಿಯಾರ್ ಆಡಿಕೆ ತಕ್ಕೊಂಡ್ ಹೋಗಳೋ ಏನೊ ? ಒವ್ಮೆ ನೋಡಿ ಹೋಗಿ'

'ಅವ್ವ' ಬೆಳಿಗೆನೇ ಸುರು ಮಾಡಿಕಂಡವೆ ರಾಮಾಯಣ. ಹಿಂಗೇ ಹೇಳಿಕಂಡ್ ರೊಟ್ಟ ಮಾಡ್‌ತ್ತಿತ್ತ್.

ಅಪ್ಪ ಪರದಾಡಿಕಂಡೆ ಎಲ್ಲಿ ಹಾಳಾತೊತ್ತೋ ಏನೊ ? ಮಜ ಚಾಮಿನ ಕರ್‍ದ ಕೇಳ್ತ್.

'ಎಲ್ಲಿನೇ ನನ್ನ ಬೆಲ್ಟ್'

ಅಂವ ಹೆದ್ರಿಕಂಡ್ ಹೊಡ್ದದೆತ್ತಾ ನಂಗೆ ಗೊತ್ಲೆ ಅಪ್ಪಾತೇಳ್ತ್.

'ಅಷ್ಟೊತ್ತಿಗೆ ಮಗ್ಳು ಚಿಮ್ಮಿ ಬಂದ್ ಅಪ್ಪಾ, ಅಪ್ಪಾ, ನಿಮ್ಮ ಬೆಲ್ಟ್‌ನ ತಕಂಡ್ ಪಟ್ಟು ಅಣ್ಣ ಕರ್ ಕಟ್ಟಕೆ ಹೋತ್. ನಾನ್ ಅಪ್ಪಂಗೆ ಹೇಳ್ನೆತಾ ಹೇಳ್‌ಕನ, ಅಪ್ಪಂಗಾರ್ ಹೇಳ್, ಅವ್ವಂಗಾರ್ ಹೇಳ್, ನಂಗೇನ್‌ತ್ತಾ ಬೈದ್ ನೀ ಹೋಗ್‌ನೆತ್ತಾ ಹೇಳಿ ನನ್ನ ದೂಡಿಹಾಕಿ ಕರ್ ಹಿಡ್‌ಕಂಡ್ ಹೋತ್.'

'ಅಲ್ಲಿಗೆ ಅಪ್ಪ ಬೈಕಂಡ್ ಕೊಡ್‌ನೇ ಬೆಲ್ಟ್ ಇತ್ತಾತೇಳಿ ಅವನ ಕೈಯಿಂದ ಬೆಲ್ಟ್‌ನ ಕಿತ್ತ್‌ಕಂಡ್ ಹೋತ್.'

ಅಪ್ಪನ ಬಾಯಿಗೆ ಅವ್ವ ಓಡಿಬಾತ್.

'ಅಲ್ಲಾ ನೀವು ಗೌರ್‍ನಮೆಂಟ್ ಕೆಲಸಲಿ ಒಳರಿ, ಒಂದು ಬೆಲ್ಟ್ ತಕ್ಕಣಿಕೆ ನಿಮಗೆ ಆದುಲ್ಲೇ. ಆ ದಟ್ಟಗೆ ಹಿಂಗೇ ಆಡಿರೇ ನೀವು.' ಮಕ್ಕಳಿಗೆ ಏನ್ ಗೊತ್ತ್ ? ಆಫೀಸ್‌ಗೆ ಹೋದರೆ ಸಂಬಳ ಆಕನ ಒಂದು ಬೆಲ್ಟ್ ತಕ್ಕಣಿಕೆ ಆದುಲ್ಲೇ. ಯಾರಾದರ್ ನೋಡ್ರೆ ಸಗಾಡ್‌ವೋ ? ಮತ್ತೆ ಮಕ್ಕ ಅದರ್‍ನ ಕರ್‌ಕಟ್ಟಿಕೆ ತಕ್ಕಂಡ್ ಹೋದ್ ತಪ್ಪಾ ?

'ಬನ್ನಿ ಒಂದು ಸಲ ರೊಟ್ಟ ತಿನ್ನಿ, ನಿಮ್ಮದ್ ಯಾಗೋಳ್ ಇದೇ ರಾಮಾಯಣ, ತೊಪ್ಪಿಗೆ ಎತ್ತಿರೆ ಬೆಲ್ಟ್‌ಗೆ ಇಲ್ಲೆ? ಬೆಲ್ಟ್ ತೆಗ್ದರೆ ಚಪ್ಪಲಿಗೆ ಇಲ್ಲೆ ಅಂತ ಅವ್ವ ಕಿರ್‌ಚಾಡಿಕಂಡ್ ಇತ್ತ್.

'ಅಪ್ಪ ಬಾತ್'

'ರೊಟ್ಟ ಕೊಡ್‌ನೇ ಇತ್ತಾ ?' Time ಆತ್‌ತ ಹೇಳಿ, ಬ್ಯಾಗ ಬ್ಯಾಗ ರೊಟ್ಟ ತಿಂದ್ ಹೊರಟೋ. ಕಾಲಿಗೆ ಚಪ್ಪಲ್ ಹಾಕೋಕ್‌ತ ಹುಡುಕಿರೆ ಚಪ್ಪಲ್ ಕಾಂಬೋದಿಲ್ಲೆ ?

'ಸಣ್ಣಕ್ಕ, ಸಣ್ಣಕ್ಕ, ಒವ್ಮೆ ಬಾನೇ ಇಲ್ಲಿ, ನನ್ನ ಚಪ್ಪಲ್ ಎಲ್ಲಿನೇ' ಎಲ್ಲಿ ಕಾಂಬೋದ್ಲೆ ?'

'ಅಲ್ಲೆ ನೋಡಿ ಇರೋಕ್'

ಅವ್ವ ಅಲ್ಲಿಯೇ ಕಿರ್‌ಚಾಡಿಕಂಡ್ ಮಕ್ಕಳನ್ನಾದರ್ ಸುಧಾರ್ಸಕ್ ನಿಮ್ಮನ ಸುದಾರಿಸಿಕ್ಕೇ ಆದುಲ್ಲೆ ನಂಗೆ'ತಾ ಹೇಳಿಕಂಡ್ ಚಪ್ಪಲ್ ಹುಡ್‌ಕ್‌ತಿರ್‍ಕನ ನಾಯಿಮರಿ ಒಂದು ಚಪ್ಪಲ್‌ನ ಕಚ್ಚಿ, ಕಚ್ಚಿ, ಚಿಂದಿಮಾಡಿ, ಹಾಕಿಕೆ ಆಗದುಗೆ ಮಾಡಿ ಮಡ್ಗಿತ್ತ್.

ಅಪ್ಪಂಗೆ ಆಫೀಸ್‌ಗೆ ಹೊಸ್ತಾಗಿ ಹೋತ್ ಹಂಗೆನೆ ಬರಿಕಾಲ್‌ಲಿ ನಡ್ಕಂಡ್ ಹೋಡೊ. ದಾರೀಲಿ ಅಪ್ಪ ಗ್ಯಾನ ಮಾಡ್ತ್, ಸ್ವಲ್ಪ ಹರಿದಿತ್ತ್ ಚಪ್ಪಲ್, ಅದನ್ನೇ ಹೊಲಿಸಿಕಂಡ್ ಹಾಕಿರೆ ಆರ್ ಹಿಂಗ ಹಾಕಕ್‌ತ ಗ್ಯಾನ ಮಾಡಿಕಂಡ್ ನಡ್ತ್. ದಾರಿಲಿ ಅವರ ಸ್ನೇಹಿತ ರಾಮಯ್ಯ ಸಿಕ್ಕಿತ್.

'ಓಹೋ ಹೋ, ಏನ್ ರಾಮಯ್ಯ ಕಾಂಬೊದೇಲೆ. ಏನ್ ವಿಶೇಷ'

'ಎಲ್ಲಾ ನೀವು ಹೇಳಕ್ಕು'

'ದೂರ ಹೊರಟೆ ಹಾಂಗೆ ಉಟ್ಟು ?'

'ಇಲ್ಲೆ ಮನೆಗೆ ಸ್ವಲ್ಪ ತರಕಾರಿ ತಕ್ಕೊಂಡ್ ಬರ್‍ನೋತ ?'

'ಬನ್ನಿ ಮತ್ತೆ ನಡೆಯನ'

ಹಾಂಗೆ ಇಬ್ಬರು ಮಾತಾಡಿಕಂಡ್ ಮಳೆ, ಬೆಳೆ, ಕಷ್ಟ, ಸುಖ ಎಲ್ಲಾ ಮಾತಾಡಿಕಂಡ್ ನಡ್ದದೇ ಗೊತ್ತಾತ್ಲೆ. ಆಫೀಸ್ ಹತ್ರ ಬಂದೋ.

ರಾಮಯ್ಯ ಪೇಟೆ ಕಡೆ ಹೊರಟೋ,

ನಿಂಗಣ್ಣ ಆಫೀಸ್‌ಗೆ ನುಗ್ಗಿದೇ ತಡ, ನಮಸ್ಕಾರ ಸರ್....ನಮಸ್ಕಾರ ಸರ್... ಅಂತ ಸಹಪಾಠಿಗಳೊಟ್ಟಿಗೆ ನಮಸ್ಕಾರ ಅಂತ ಹೇಳಿಕಂಡ್ ಆಫೀಸ್ ರೂಮ್‌ಗೆ ಹೋಗಿ ಸಹಿ ಹಾಕಾಕುತ ಜೇಬು ಹುಡುಕಿರೆ. ಪೆನ್ನೇ ನಾಪತ್ತೆ. ಎಲ್ಲಿ ಜೇಬು ಹುಡುಕಿ ತಡಕಾಡಿರೂ ಎಲ್ಲಿ ಸಿಕ್ಕಿತ್ಲೆ. ಜೇಬು ಎಲ್ಲಿಯಾದ್ರ್ ಕಣ್ಣಾಗುಟ್ಟ್ಯಾಂತ ನೋಡ್ತ್. ಅದ್ ಸರಿ ಉಟ್ಟು. ಮತ್ತೆ ಏನಾತ್ ? ಮನೆಗೆ ಹೋಗಿ ವಿಚಾರಿಸಿಕಣೆ.

ಸ್ನೇಹಿತನ ಕೈಯಿಂದ ಪೆನ್ನ್ ಕೆಳ್ಕಂಡ್ ಆ ದಿನದ ಆಫೀಸ್ ಕೆಲಸ ಮುಗ್ಸಿತ್.

ಅಷ್ಟು ಲಾಯಿಕ ಪೆನ್ನ್ ಕೋಟ್ ಜೇಬುಲಿ ಮಡಗಿದ್ದೆ, ಏನಾತ್.

ನಿಂಗಣ್ಣಂಗೆ ಆ ದಿನದ ಆಫೀಸ್ ಕೆಲಸ ಮಾಡ್ದಂಗ ಆತ್ಲೆ. ಅದೇ ಗ್ಯಾನ. ಸಂಜೆ 5 ಗಂಟೆಗೆ ಆಫೀಸ್ ಬುಟ್ಟ್ ಹೊರಟೋ. ದಾರೀಲಿ, ರಾಮಯ್ಯನ ಮಜ ರಂಜಿತ

'ಮಾಮ, ಮಾಮ, ನೀವು ಬಾಬುಗೆ ಯಾವ ಅಂಗಡಿಂದ ಪೆನ್ನ್ ತೆಗ್ದ್ ಕೊಟ್ಟದ್ ಮಾಮ, ತುಂಬಾ ಲಾಯಕ್ ಬರ್‍ದದ, ಮಾಮ ನಂಗೊಂದು ಪೆನ್ನ್ ತೆಗೆದ್‌ಕೊಟ್ರೆ ಮಾಮ.

ನನ್ನ ಸಂಕಟ ನಂಗೇ ಗೊತ್ತು. ಇವಂಗೆ ನಾನ್ ಪೆನ್ನ್ ತೆಗ್ದ್ ಕೊಟ್ಟನೇಂತಾ

ಹೆಂಗೆ ಹೇಳ್ವ.

'ನಿಂಗೆ ನಾಳೆ ತೆಗ್ದ್ ಕೊಟ್ಟನೆ ಆತಾ ! ಈಗ ನಂಗೆ ಅರ್ಜೆಂಟ್ ಮನೆಗೆ ಹೊರಡಕು ತುಂಬಾ ಕೆಲಸ ಉಟ್ಟುತ ಹೇಳಿ ಅವನ ಸಾಗ ಹಾಕಿತ್.'

ದಾರಿಲಿ ಮಕ್ಕೆಲ್ಲಾ ಪೆನ್ಸಿಲ್ ಕಡ್ಡಿಲೇ ಬರಿಯೊದು. ಪೆನ್ನು ಹೇಂಗೆ ಸಿಕ್ತಿತ್‌ತಾ? ಗ್ಯಾನ ಮಾಡಿಕಂಡ್ ಮನೆ ಕಡೆ ಹೊರಟತ್.

ಮನೆ ಹತ್ರ ಬಂದಂಗೆ ದಾವುಕಾಲ್ ಹಾಕಿತ್ ಗಡಿಗೆ ದಪ್ಪ ದುಂಡು ಮುಖನ ಮಾಡಿಕಂಡ್.

'ಬಾಬು, ಬಾಬು ಬಾ ಇಲ್ಲಿ, ನನ್ನ ಜೇಬುಂದ ಪೆನ್ನ್ ತೆಗ್ದನೆ ?'

ಬಾಬು ಹೆದ್ರ್‌ತ್ ಅಪ್ಪ ಹೊಡ್ದದೇತ! ಉಸಿರ್ ಕಟ್ಟಿಕಂಡ್ ಕಾಲ್ ಹೆಬ್ಬೆರಳ್‌ಲಿ ನೆಲ ಕೆರಕಂಡ್ ನಿತ್ತತ್.

ನಿನ್ನ ಕೇಳ್ದ ಸಣ್ಣಕ್ಕ ಕೋಲ್ ಕೊಡ್ಡೆ ಇತ್ತ.

ಅಷ್ಟೊತ್ತಿಗೆ ಅವ್ವ ಕಿರ್‌ಚಾಡಿಕಂಡ್ ಬಾಯಿ ಬಡಕಂಡ್ ಬಾತ್.

ಮಕ್ಕಳಿಗೆ ಬೇಕಾದಂಗೆ ಒಂದು ವಸ್ತು ತೆಗ್ದ್ ಕೊಡ್ದುಲ್ಲೆ. ಅವುಕ್ಕೆ ಆಸೆ ಇದ್ದದೆ.

ಅಪ್ಪ ಹೊಡಿಯಕೆ ತಂದ ಕೋಲ್‌ನ ಬಿಸಾಕಿತ್.ಎಲ್ಲ ನಿನ್ನಿಂದ ಸಸರ ಮಕ್ಕಳಿಗೆ. ಅವ್ವಂಗೆ ಬೇರೆ ಬೈಗಳ.

ಒಂದು ಕ್ಲಾಸ್ ದಾಟತ್ಲೆ, ಆಗಲೇ ಇವುಕ್ಕೆ ಪೆನ್ನ್ !

ಬಾಬು ಹೆದ್ರಿ ಕಾಲ್ ಹೆಬ್ಬರಳ್‌ಲಿ ನೆಲ ಕೆರಕಂಡ್. ತಲೆ ಅಡಿಗೆ ಹಾಕಂಡ್, ಕಣ್ಣಲಿ ನೀರ್ ಸೊರಿಸಿಕಂಡ್, ಮೂಗ್‌ಲಿ ಗೊಣ್ಣೆ ಸೊರಕ್, ಸೊರಕ್‌ತಾ ತ್ರಿಶಂಕುನ ತರ ಮೇಲೆ ಕೆಳಗೆ ಎಳಕಂಡ್ ಅಪ್ಪ ಅವ್ವನ ಕಿರ್‌ಚಾಟ ನೋಡಿಕಂಡ್ ನಿತ್ತತ್ ಅಪ್ಪ ಅವ್ವನ ಜಗಳಲಿ ಮಕ್ಕೆಲ್ಲಾ ಅಂದ್ ಉಪವಾಸಆಗಿ ಎಲ್ಲಾ ಹಂಗೇ ಮಲ್ಗಿಡೋ.ಅವ್ವ ಮಕ್ಕಳೊಟ್ಟಿಗೆ ಮಲ್ಗಿತ್.

ಅಪ್ಪಂಗೆ ನಿದ್ದೆ ಬಾತ್ಲೆ. ಎದ್ದೆದ್ದ್ ಅವ್ವನ ನೋಡ್ದು, ಅಪ್ಪನ ಪರದಾಟವೇ ಪರದಾಟ.

ಅವ್ವಂಗೆ ಮಕ್ಕಳ ಸುಧಾರ್ಸಿ, ಮನೆ ಕೆಲಸ ಮಾಡಿ, ಸೊಂಟ ಸೋಭಾನೆ ಆಗಿ, ಸುಸ್ತಾಗಿ ಮಲಗಿದ್ದರೆ, ಅಪ್ಪ ಬಂದ್ ಬಂದ್,

'ಸಣ್ಣಕ್ಕ ಸಣ್ಣಕ್ಕ, ಬಾನೇ...ಇಲ್ಲಿ ಮಕ್ಕಳೊಟ್ಟಿಗೆ ಎಲಗಿರೆ ಒದ್ದಾಡುವೆ.... ಬಾನೆ...ಇಲ್ಲಿಗೆ...ಒವ್ಮೆ ಸಣ್ಣಕ್ಕ.

ಬಡಕಲ್ ಶರೀರ, ಗುಳಿ ಬಿದ್ದ ಕಣ್ಣ್, ಸೊರಗಿದ ಮುಖ, ತಲೆ ತಿರುಗಿದಂಗಾಗಿ ಸಣ್ಣಕ್ಕ ಒವ್ಮೆ ಕೆಳಗೆ ಬೀಳ್‌ಕನ ಗೊತ್ತ್. Test ಮಾಡ್ದ ಡಾಕ್ಟರ್ ಹೇಳ್‌ಕನೇ ಅಪ್ಪಂಗೆ ಅವಳು ಬಸ್ರಿಂತ ಗೊತ್ತಾದ್.

ಸಣ್ಣಕ್ಕಂಗೆ ಕೆಲಸ ಮಾಡಿಕೆ ಆದ್ಲೆ, ಶರೀರಶೀರ ಕ್ಷೀಣ ಆಕನೇ ಅಪ್ಪಂಗೆ, ಅವ್ವ ಮಾಡೊ ಕೆಲ್ಸ ಜಾಸ್ತಿಆತ್‌ತ ಗೊತ್ತಾದ್.

ಅಪ್ಪ ಆಫೀಸ್‌ಗೆ ಯಾಗೋಳ್ ಲೇಟ್ ಆಗಿ ಹೋಕೆ ಆತ್, ಬೈಗಳ ಬೇರೆ

ಸಣ್ಣಕ್ಕ ಒವ್ಮೆ ಅವಳ ಮಕ್ಕಳ ಹೆರಿಗೆ ಆಗಿ ಕೂಸು ಎರಡ್ ಪೊರಲ್ ಇದ್ದೋ.

ಅಪ್ಪ ಯಾಗೋಳು ಆಫೀಸ್‌ಗೆ ಲೇಟ್ ಆಗಿ ಹೋದು.

ಒಂದು ದಿನ ಬಾಸ್, 'ಯಾಕಯ್ಯ ಲೇಟ್ ಆಗಿ ಬರುವುದು time pick up ಮಾಡಲಿಕೆ ಆಗೊಲ್ವ? ಮನೆಯಲ್ಲಿ ಇದ್ದು ಏನು ಮಾಡುತ್ತೀಯಾ ? ಮನೆ ಕೆಲಸಕ್ಕೆ ಹೆಂಡತಿ ಇಲ್ವ? ಇನ್ನು ಮುಂದೆ ಲೇಟ್ ಆಗಿ ಬರಬೇಡ ಹೋಗು, ಹೋಗು...ನಿನ್ನ ಕೆಲಸ ನೋಡಿಕೋ' ಅಂತ ಬೈತ್.

ಒಂದು ದಿನ ಅಪ್ಪನ ಆಫೀಸ್‌ಗೆ ದೊಡ್ಡ ಅಧಿಕಾರಿಗ ಬಂದೊ. ಎಲ್ಲಾರನ್ನ ವಿಚಾರ್ಸಿ ಕಂಡ್ lastಗೆ ಅಪ್ಪನ,

'ಏನಯ್ಯ ನಿನಗೆ ಎಷ್ಟು ಮಕ್ಕಳು'

'ಆರು ಸಾರ್.'

'ಏನಂದೆ, ಏನಂದೆ'

'ಅದೇ ಆರು ಸಾರ್'

'ಅಲ್ಲಯ್ಯ ಮಕ್ಕಳೆ ಇಲ್ಲದ ನನಗೆ ಈ ಸಂಬಳ ಸಾಕಾಗುವುದಿಲ್ಲ. ನೀನು ಹೇಗಯ್ಯ ಸುಧಾರಿಸುತ್ತೀಯಾ ?'

'ಎಲ್ಲಾ ದೇವರ ಕೃಪೆ ಸಾರ್'

ಮಾಡೋದು ಮಾಡಿ ದೇವರ ಮೇಲೆ ಯಾಕಯ್ಯ ಭಾರ ಹಾಕುತ್ತೀಯಾ ? ಸರಿ, ಅಲ್ಲಯ್ಯ ನಿನಗೆ ಬುದ್ಧಿ–ಗಿದ್ಧಿ ಇದೆನಯ್ಯ? ಸರಕಾರಿ ನೌಕರ ಆಗಿ ಆರು ಮಕ್ಕಳ ತಂದೆ ಅಂತ ಹೇಳುತ್ತೀಯಲ್ಲ ನಿನಗೆ ಏನ್ ಹೇಳಲಿ

ಇಂಕ್ರಿಮೆಂಟ್ ಪುಸ್ತಕ ತೋರಿಸುತ್ತಾ

'ನೋಡಯ್ಯ ಇಲ್ಲಿ ನಿನಗೆ ಇನ್ನು ಮುಂದೆ ಇಂಕ್ರಿಮೆಂಟ್ ಸಿಕ್ಕುವುದಿಲ್ಲಾ ಗೊತ್ತಾ ?

'ನನಗೆ ಗೊತ್ತಾಗಲಿಲ್ಲ ಸಾರ್'

'ನೀನೇನು ಚಿಕ್ಕ ಮಗೂನ. ಈಗಿನ ಮಕ್ಕಳಿಗೆ ಈಗಿನ ಕಾನೂನು ಕಾಯಿದೆಗಳು ಗೊತ್ತಿರುವಾಗ ನೀನೇನಯ್ಯ.

'ಇಕೋ, ಇಲ್ಲಿ ನೋಡು ಈ board ಓದು'

'ಆರತಿಗೆ ಒಬ್ಬಳು ಮಗಳು ಕೀರ್ತಿಗೆ ಒಬ್ಬ ಮಗ' ಅಪ್ಪಅದನ್ನ ಓದಿಕಂಡ್ ಸಪ್ಪೆ ಮೋರೆ ಮಾಡಿಕಂಡ್ ಮನೆಗೆ ಬಾತ್, ತನ್ನ ತಪ್ಪು ಅರ್ಥ ಮಾಡಿಕಂಡ್ ಗಡ್ಡ ಮೇಲೆ ಕೈ ಹೊತ್ತ್ ಕುದ್ದತ್. ●

---

## ಕೊಡಗು ಸಂಗಾತಿ

ನಗುವ ಮಗು ಅಂದ
ಆಡುವ ಹೈದ ಚೆಂದ
ನಗುವ ತುಟಿ ಅಂದ
ಓದಲು ಕೊಡಗು ಸಂಗಾತಿ ಚೆಂದ ॥

ಅಪ್ಪಂಗೆ ಅವ್ವ ಬೇಕು
ಅವ್ವಂಗೆ ಕೂಸು ಬೇಕು
ಬಾಳಿಗೆ ಬರಹ ಬೇಕು
ಓದುವಿಕೆ ಕೊಡಗು ಸಂಗಾತಿ ಬೇಕು

○ ಚೇಂದ್ರಿಮಾಡ ಗ. ಮುತ್ತಪ್ಪ
ಕುಶಾಲನಗರ

K.R.N.N. 240

10-01-96 TCI Kar. 09592

ಕರೆ—ನೊರೆ

## ಕೊಡಗು ಸಂಗಾತಿ ಮಹಾ ಓದುಗರಲ್ಲಿ ಮತ್ತು ಅರೆಭಾಷಿಕ ಗೌಡ ಬಾಂಧವರಲ್ಲಿಯೂ ಕಳಕಳಿಯ ಮನವಿ

ಕೊಡಗು ಸಂಗಾತಿ ಪಾಕ್ಷಿಕವು ದಿನಾಂಕ 1-4-97ರಿಂದ ಇಲ್ಲಿಯತನಕ ಎಡೆಬಿಡದೆ ನಿರಂತರವಾಗಿ ಹೊರಬರುತ್ತಲಿದ್ದು, ಮುಖ್ಯವಾಗಿ ಕೊಡಗು ನಾಡಿನ ಅರೆಭಾಷಿಕರ ಐಕ್ಯತೆಯ ಮಾಧ್ಯಮವಾಗಿ ಬಂದಿದೆ. ತನ್ನ ನಾಡಿನ ಗ್ರಾಮಾಂತರ ಪ್ರದೇಶದಿಂದ, ಗ್ರಾಮಾಂತರ ಪ್ರತಿಭೆಯನ್ನು ಹೆಕ್ಕಿ ಪರಿಚಯಿಸುವಲ್ಲಿ ಸಫಲವಾಗಿದೆ. ಜನಾಂಗದಲ್ಲಿ ಲೇಖಕರನ್ನು ಹುಟ್ಟು ಹಾಕುವ ಮಾಧ್ಯಮವಾಗಿದೆ. ಕಾಲ ಕಂಡು ಕಾಲೋಣರಾಗಿರುವ ಹಿರಿಯರನ್ನು ಸ್ಮರಿಸುವ ಹಾಗೂ ಕಿರಿಯರಿಗೆ ಮಾರ್ಗದರ್ಶನದ ಪತ್ರಿಕೆಯಾಗಿದೆ. ಕೊಡಗಿನಲ್ಲಿ ಅರೆಭಾಷಿಕ ಗೌಡ ಜನಾಂಗವೊಂದಿದೆ ಎನ್ನುವುದನ್ನು ಹೊರಜಗತ್ತಿಗೆ ಪ್ರಚುರಪಡಿಸುತ್ತಿರುವ ಮಾಧ್ಯಮವಾಗಿದೆ. ಚಿಕ್ಕಪುಟ್ಟ ಬರಹಗಾರರಿಗೆ ತಮ್ಮ ಪ್ರತಿಭೆಯನ್ನು ಹೊರಸೂಸಲು ಅತ್ಯುತ್ತಮ ಮಾಧ್ಯಮವಾಗಿದೆ.

ಆದರೆ ಯಾವುದೇ ಪತ್ರಿಕೆಯನ್ನು ಜಾಹೀರಾತು, ಶುಭಾಶಯಗಳು ಇಲ್ಲದೆ ನಡೆಸುವುದು ಮಹಾ ಮಹಾ ದುಸ್ತರ ಕೆಲಸವಾಗಿದೆ. ಅಭಿಮಾನದ ಜನತೆಯನ್ನು ನಂಬಿ, ಜನತೆಯ ಏಳ್ಗೆಯನ್ನು ಬಯಸಿ, 21ನೇ ಶತಮಾನಕ್ಕೆ ಕಾಲಿಕ್ಕುವ ಮೊದಲು ಜನಾಂಗದ ಪರವಾಗಿ ಹೊರಬಂದ ಪತ್ರಿಕೆಯೇ ಈ ಕೊಡಗು ಸಂಗಾತಿ.

ಸಂಗಾತಿ ಬಳಗ ತನ್ನೆಲ್ಲ ಕಷ್ಟ ಕಾರ್ಪಣ್ಯಗಳನ್ನು ಮರೆತು ಇಲ್ಲಿಯ ತನಕ ಧೈರ್ಯವಾಗಿ ಯಾವುದೇ ರೀತಿಯಲ್ಲಿ ಎದೆಗುಂದದೆ ನಿರಂತರವಾಗಿ ಹೊರತಂದಿದೆ.

ಪ್ರಿಯ ಚಂದದಾರರು ಏಪ್ರಿಲ್ 1 ರಿಂದ ನವೀಕರಣಗೊಳಿಸದೆ ಇರುತ್ತಾರೆ. ಅಂತಹವರು ದಯವಿಟ್ಟು ಶೀಘ್ರವಾಗಿ ಚಂದಾ ಹಣವನ್ನು ಕಳುಹಿಸಿ ನವೀಕರಣ ಮಾಡಿಕೊಳ್ಳುವಂತೆ ವಿನಂತಿ. 15-1-98ರ ತನಕ ಸುಮಾರು 50 ಸಾವಿರದಷ್ಟು ನಷ್ಟವನ್ನು ಅನುಭವಿಸಿದೆ. ಈಗಲೂ ಸಹ 1-4-98ರಿಂದ ನವೀಕರಿಸದೇ ನಷ್ಟದ ಹಾದಿಯಲ್ಲಿದೆ. ಮಹಾಜನತೆ ಮತ್ತು ಓದುಗರು ಇದನ್ನು ಗಂಭೀರವಾಗಿ ಮನಗಾಣಬೇಕು.

ಜನತೆ ನವೀಕರಣವನ್ನು ಮತ್ತು ಜಾಹೀರಾತುಗಳನ್ನು ನೀಡಿ ಸಹಕರಿಸುವಂತೆ ಕೋರಿಕೆ. ಜನಾಂಗದ ಹಿತಚಿಂತಕರು, ಪ್ರಜ್ಞಾವಂತರು, ಸ್ಥಿತಿವಂತರೂ, ಬಡವ ಬಲ್ಲಿದರು, ಪತ್ರಿಕಾ ಪ್ರೇಮಿಗಳು, ವ್ಯಾಪಾರಸ್ಥರು, ಜನಾಂಗ ಪ್ರೇಮಿಗಳು ಮತ್ತು ಮೇಲಾಗಿ ಗೌಡ ಸಮಾಜ, ವಿದ್ಯಾ ಸಂಸ್ಥೆ, ಗೌಡ ಅಕಾಡೆಮಿ, ಮಹಿಳಾ ಒಕ್ಕೂಟ ಹಾಗೂ ಇತರೆ ಯುವ ಮಂಡಳಿಗಳು ಈ ಕೊಡಗು ಸಂಗಾತಿಯ ಮನವಿಯನ್ನು ಗಂಭೀರವಾಗಿ ಪರಿಗಣಿಸಿ ಚಿಂತಿಸುವಂತೆ ಜನಾಂಗದ ಮಹಾಜನತೆಯ ಪರವಾಗಿ ವಿನಂತಿಸಿಕೊಳ್ಳುತ್ತೇವೆ.

—ಸಂಪಾದಕಿ ಮತ್ತು ಸಂಗಾತಿ ವೃಂದ

Printed by M K Thammaiah and Published byKodagu Sangathi on behalf of Pattada P. Sheelamani and Printed at ASHIRWAD PRINTERS 180/A, 6th Main, Vinayakanagar, Mysore-12 Published at Mysore, Editor PATTADA P. SHEELAMANI, No. 35, 1st Cross, 4th Block (Near Divisional Telephone Office) Jayalakshmipuram, Mysore-570 012 Phone : 516771